# ಭಾಷಣ ಭೈರವರ ಒಡ್ಡೋಲಗ

(ವಿಡಂಬನಗಳ ಸಂಗ್ರಹ)



ಪ್ರೊ। ಬಿ. ಎಚ್. ಶ್ರೀಧರ



ಸಮಾಜ ಶಿಕ್ಷಣಕ್ಕೆ ಮೀಸಲಾದ ಸಾಹಿತ್ಯ



# ಭಾಷಣ ಭೈರವರ ಒಡ್ಡೋಲಗ

ವಿಡಂಬನಗಳ ಸಂಗ್ರಹ

ಲೇಖಕ:

ಪ್ರೊ| ಬಿ. ಎಚ್. ಶ್ರೀಧರ, ಎಂ. ಎ.

ಸಮಾಜ ಶಿಕ್ಷಣಕ್ಕೆ ಮೀಸಲಾದ ಸಾಹಿತ್ಯ

"೫೦ ಪೈಸೆ ಮಾಲೆ"

(ದ್ವಿಮಾಸಿಕ)

ಸಂಪಾದಕ:

ಕೋಣಿ ಕೃಷ್ಣ ಭಂಡಾರಿ

೬ನೇ ಸಂಚಿಕೆ, ಫೆಬ್ರವರಿ ೧೯೬೬

ಪ್ರಕಾಶಕರು:

ಎ. ಎಂ. ಜಿ. ಸಾಹಿತ್ಯಪ್ರಕಾಶನ,

(ಶ್ರೀ ಆನೆಗುಡ್ಡೆ ಮಹಾಗಣಪತಿ ಸಾಹಿತ್ಯಪ್ರಕಾಶನ)

ಕಲ್ಸಂಕ, ಉಡುಪಿ-೨

## ಎ. ಎಂ. ಜಿ. ಸಾಹಿತ್ಯ ಪ್ರಕಾಶನ

## " ೫೦ ಪೈಸೆ ಮಾಲೆ"

ಕಲ್ಸಂಕ — ಉಡುಪಿ-೨.

ಕನ್ನಡದ ಉದಯೋನ್ಮುಖ ಬರಹಗಾರರ ಸ್ವತಂತ್ರ ಲೇಖನಗಳನ್ನೇ ಆಯ್ದು, ಪ್ರತೀ ಎರಡು ತಿಂಗಳಿಗೊಬ್ಬ ಲೇಖಕರಿಗೆ ಪ್ರೋತ್ಸಾಹ ರೂಪವಾಗಿ, ಸಾಹಿತ್ಯ ಕುಸುಮವನ್ನು ಪ್ರಕಟಿಸಿ, ತನ್ಮೂಲಕ ಸಮಾಜ ಶಿಕ್ಷಣ—ಸಾಹಿತ್ಯ ಸೇವೆ—ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹ ಎಂಬ ಮೂರು ಉದ್ದೇಶಗಳಿಗಾಗಿ ಶ್ರಮಿಸುತ್ತಿದ್ದೇವೆ.

ಲೇಖಕರು ಸಮಾಜ ಶಿಕ್ಷಣಕ್ಕೆ ಉಪಯುಕ್ತ — ಗೃಹಿಣಿಯರಿಗೆ ಸಲಹೆ — ವಿದ್ಯಾರ್ಥಿಗಳಿಗೆ ಮಾರ್ಗದರ್ಶನ — ಸಮಾಜಕ್ಕೆ ನೀತಿಯುಕ್ತವಾದ ಲೇಖನಗಳನ್ನು ಕಳುಹಿಸಿ ಸಹಕರಿಸಬೇಕು.

ಕನ್ನಡ ಸಾಹಿತ್ಯಾಭಿವೃದ್ಧಿಯನ್ನು ಹಾರೈಸುವ ಎಲ್ಲಾ ಕನ್ನಡಿಗರೂ ಅತಿಜಟಿಲವಾದ ಕನ್ನಡ ಸಾಹಿತ್ಯ ಪ್ರಕಟನೆಗೆ ಉತ್ತೇಜನ ನೀಡಿ, ನಾವು ಕೈಗೊಂಡಿರುವ ಕಾರ್ಯದಲ್ಲಿ ಸಹಭಾಗಿಯಾಗಿ ಕನ್ನಡಾಂಬೆಯ ಕೀರ್ತಿ ದಶದಿಕ್ಕುಗಳಲ್ಲೂ ಹಬ್ಬುವಂತೆ ನೆರವಾಗಬೇಕು.

ಸಂಪಾದಕ.

# ಅರಿಕೆ

ವಿಡಂಬನವು ಒಂದು ಸಾಹಿತ್ಯಕಲೆ. ವಸ್ತು, ವ್ಯಕ್ತಿ, ಸಂನಿವೇಶ, ಘಟನೆಗಳ ಬೆಲೆ ಅತಿಶಯ ಕಡಿಮೆಯಾಗುವಂತೆ ಚಿತ್ರಿಸುವುದು ಇಲ್ಲಿ ಸಹಜ. ವಿಡಂಬನದಲ್ಲಿ ವ್ಯಕ್ತಿಗತ ಟೀಕೆ ಎಂದು ಒಮ್ಮೆ ತೋರಿದರೂ ಅದು ಆ ವ್ಯಕ್ತಿಯ ವರ್ಗಕ್ಕೆ ಅನ್ವಯಿಸುತ್ತದೆ.

ಈ ವಿಡಂಬನ ಸಂಗ್ರಹದಲ್ಲಿ ವರ್ತಮಾನಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಮುಂತಾದ ವ್ಯವಹಾರಗಳಲ್ಲಿ ವಿವಿಧ ಮಾದರಿಯ ವಾಗ್ವರ್ತನೆಗಳನ್ನು ಇಲ್ಲಿ ಚಿತ್ರಿಸಲಾಗಿದೆ. ನಮ್ಮ ಧುರೀಣರಲ್ಲಿ ಕೃತಿಗಿಂತ ಮಾತು ಹೆಚ್ಚಾಯಿತೆಂದು ಜನತೆ ಇಂದು ಅರಿತಿದೆ. ಈ ಪಟಾಕಿ ಪುಟ್ಟತನ, ಪಟ್ಟಂಗ ಶೂರತನ, ಹರಟೆಮಲ್ಲತನ, ಅನೇಕರಿಗೆ ಜುಗುಪ್ಸೆ ಉಂಟಾಗುವಷ್ಟು ಮುಂದುವರಿದಿದೆ. ಭಾಷಣ ಭೈರವರ ಒಡ್ಡೋಲಗವನ್ನು ಕಾಣದ ಊರು ಇಂದು ಸಿಗಲಾರದು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ದಕ್ಷ ನಾಯಕರೂ ಕಾಣಿಸಿಕೊಂಡರು, ಅದಕ್ಷ ನಾಯಕರೂ ಅವತರಿಸಿದರು. ಆದರೆ ದಿನೇ ದಿನೇ ನಾಯಕತ್ವದ ಮಟ್ಟ ಇಳಿಯುತ್ತ ಬಂದಂತೆ ಅನೇಕರಿಗೆ ತೋರಿದೆ. "ತರುಣರಲ್ಲಿ ಧ್ಯೇಯವಿಲ್ಲ, ಸ್ಫೂರ್ತಿಯಿಲ್ಲ – ಜನರಲ್ಲಿ ಆರಂಭಶೀಲವಿಲ್ಲ – ಸಹಕಾರ ಬುದ್ಧಿಯಿಲ್ಲ" ಎಂದು ಬೋಧಿಸಿ ಸಹಜ ಮತ್ತು ಕೃತಕ ವ್ಯಸನಗಳನ್ನು ವ್ಯಕ್ತಪಡಿಸುತ್ತ ಬಂದಿರುವ ನಮ್ಮ ರಾಜಕೀಯ ಧುರೀಣರು ತಮ್ಮನ್ನು ತಾವೇ ಮರೆತಂತಿದೆ. ಅದಕ್ಕಾಗಿ ಸಾರ್ವಜನಿಕ ಸ್ಮೃತಿಬಲವನ್ನು ಬಡಿದೆಬ್ಬಿಸಿ ದಕ್ಷರೂ ಪ್ರಾಮಾಣಿಕರೂ ಆದ ಮುಂದಾಳುಗಳನ್ನೇ ಆಯ್ದು ಬೆಂಬಲಿಸುವ ಸತ್ಪ್ರವೃತ್ತಿ ನಮ್ಮ ಜನತೆಯಲ್ಲಿ ಜಾಗ್ರತವಾಗಲಿ ಎಂಬುದೇ ಈ ವಿಡಂಬನಕಾರನ ಉದ್ದೇಶ.

ಹಿಂದೆ 'ನಗುವ ನಂದ'ದಲ್ಲಿ ಪ್ರಕಟಿತವಾದ ಈ ಸಂಗ್ರಹವನ್ನು ತಮ್ಮ ಮಾಲೆಯ ಕಿರುಹೊತ್ತಿಗೆಯನ್ನಾಗಿ ಪ್ರಕಟಿಸಲು ಉದ್ಯುಕ್ತರಾದ ಶ್ರೀ ಕೋಣೆ ಕೃಷ್ಣ ಭಂಡಾರಿಯವರ ಪ್ರಕಟನೋತ್ಸಾಹವನ್ನು ಅಭಿನಂದಿಸಲೇಬೇಕು. ಶ್ರೀ ಆಣೆಗುಡ್ಡೆ ಮಹಾಗಣಪತಿಯ ಹೆಸರಿನಲ್ಲಿ ಮನೋರಂಜನೆಯ ಮೂಲಕ ಸಮಾಜ ಶಿಕ್ಷಣವನ್ನು ನೆರವೇರಿಸಲು ವ್ಯವಸ್ಥೆ ಮಾಡಿಕೊಂಡ ಸಂಪಾದಕ ಮಿತ್ರರ ಸದಾಶಯಕ್ಕೆ ಜಯ ಲಭಿಸದೇ ಇರಲಾರದು ಎಂದು ನನ್ನ ದೃಢವಾದ ನಂಬಿಕೆ. ಈ ಪ್ರಯೋಗದ ಬಗ್ಗೆ ಕನ್ನಡಿಗರು ಪ್ರೋತ್ಸಾಹ ಕೊಡಲು ಹಿಂದೆ ಮುಂದೆ ನೋಡಲಾರರು ಎಂದು ನನ್ನ ಪ್ರತ್ಯಾಶೆ.

ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು,
ಶಿರಸಿ, ಉ. ಕ. ಜಿಲ್ಲೆ.
೯–೧೨–೧೯೭೫

— ಬಿ. ಎಚ್. ಶ್ರೀಧರ

ಪುಸ್ತಕದ ಬೆಲೆ ೫೦ ಪೈಸೆ!   ವರ್ಷಕ್ಕೆ ಆರು ಪುಸ್ತಕಗಳು!

ವಾರ್ಷಿಕ ಚಂದಾ ಮೂರು ರೂಪಾಯಿಗಳು!

(ಅಂಚೆ ವೆಚ್ಚ ರಿಯಾಯ್ತಿ)

**ಸಮಾಜ ಶಿಕ್ಷಣಕ್ಕೆ ಮೀಸಲಾದ ಸಾಹಿತ್ಯ**

ಜನಪ್ರಿಯ "೫೦ ಪೈಸೆ ಮಾಲೆ" (ದ್ವಿಮಾಸಿಕ)

ಈ ವರಗಿನ ಪ್ರಕಟನೆಗಳು.

೧. ಶ್ರೀ ಎನ್. ಬಿ. ಮೊಗಸಾಲೆ — ಹಸಿರು-ಬಿಸಿಲು
೨. ಶ್ರೀ ಎನ್. ನಾರಾಯಣ ಬಲ್ಲಾಳ — ಮಕರಂದ
೩. ಶ್ರೀ ಬೈಪಾಡಿ ಚಂದ್ರಶೇಖರ ಜೈನ — ನವ್ಯ ಸಮಾಜದ ಬರಡೆಮ್ಮೆಗಳು
೪. ಶ್ರೀ ಶ್ರೀನಿವಾಸ ಉಡುಪ (ಹೊಸನಗರ) — ಬದುಕು
೫. ಶ್ರೀ ನಾ. ಡಿ. ಸೋಜ (ಕಾರ್ಗಲ್) — ಸ್ವರ್ಗದ ಬಾಗಿಲಲ್ಲಿ ನರಕ
೬. ಪ್ರೊ. ಬಿ. ಎಚ್. ಶ್ರೀಧರ, ಎಂ.ಎ. — ಭಾಷಣ ಭೈರವರ ಒಡ್ಡೋಲಗ

ಪ್ರತಿ ಎರಡು ತಿಂಗಳಿಗೊಂದು ಉತ್ತಮ ಪ್ರಕಟಣೆ!
ಪ್ರತಿ ಎರಡು ತಿಂಗಳಿಗೊಂದು ಲೇಖಕರ ಪರಿಚಯ!!
ಭಿನ್ನ ವಿಭಿನ್ನ ಸಾಹಿತ್ಯಗಳ ರಸದೌತಣ!!!

ಪ್ರತೀ ಫೆಬ್ರುವರಿ, ಎಪ್ರಿಲ್, ಜೂನ್, ಅಗೋಸ್ತು, ಅಕ್ಟೋಬರ, ಹಾಗೂ ದಶಂಬರ ತಿಂಗಳುಗಳಲ್ಲಿ ಬಿಡುಗಡೆ.

ಮೂರು ರೂಪಾಯಿಗಳನ್ನು ಮನಿಯಾರ್ಡರ್ ಮಾಡಿದಲ್ಲಿ ಚಂದಾದಾರರಾಗಬಹುದು. ಚಂದಾದಾರ ಪಟ್ಟಿಯನ್ನು ಕ್ರಮವಾಗಿ **"೫೦ ಪೈಸೆ ಮಾಲೆ"** ಯಲ್ಲಿ ಪ್ರಕಟಿಸಲಾಗುವುದು.

**ವ್ಯವಹರಿಸಿರಿ:—**

ಸಂಪಾದಕ   "೫೦ ಪೈಸೆ ಮಾಲೆ"
ಕೋಣಿ ಕೃಷ್ಣ ಭಂಡಾರಿ   ಎ. ಎಂ. ಜಿ. ಸಾಹಿತ್ಯ ಪ್ರಕಾಶನ

[ **ಕಲ್ಸಂಕ** — ಉಡುಪಿ ೨. ]

# ಒಂದು ವರ್ಷದ ಎಳೆಯ ಕೂಸು

ಕನ್ನಡಿಗರ ಮಮತೆಯ ಕೂಸು "೫೦ ಪೈಸೆ ಮಾಲೆ"ಗೆ ಒಂದು ವರ್ಷ ತುಂಬಿತು. ಹುಟ್ಟಿದ ಸಡಗರವಿಲ್ಲ, ತೊಟ್ಟಿಲಿಗಿಕ್ಕುವ ಶಾಸ್ತ್ರ ಮಾಡಲಿಲ್ಲ. ಹುಟ್ಟಿ ಒಂದು ವರ್ಷ ತುಂಬಿದರೂ ಹುಟ್ಟುಹಬ್ಬವನ್ನು ಕಾಣಬೇಕೆಂಬ ಬಯಕೆ ಕನಸಿನ ಮಾತಾಯಿತು. ಎರಡು-ಮೂರು ಕೋಟಿ ಮಕ್ಕಳನ್ನು ಪಡೆದ ಕನ್ನಡ ಮಾತೆಗೆ: ತನ್ನ ಮುದ್ದು ಕುವರನೆನಿಸಿದ "೫೦ ಪೈಸೆ ಮಾಲೆ"ಯ 'ಹುಟ್ಟು ಹಬ್ಬ' ಆಚರಿಸಿ ಅಂದ-ಚೆಂದವನ್ನು ನೋಡುವ ಭಾಗ್ಯ ಇಲ್ಲ. ಎಂದಾದರೊಂದು ದಿನ ನನ್ನ ಕನ್ನಡ ಮಕ್ಕಳು ಒಂದೇ ಮನಸ್ಸಿನಿಂದ ಒಗ್ಗಟ್ಟಾಗಿ ಬಾಳಿ ಕನ್ನಡವನ್ನು ಮಮತೆಯಿಂದ ಕಂಡಾರು ಎಂಬ ತಾಯ್ತನದ ನಂಬಿಕೆ ಕನ್ನಡಮ್ಮನಿಗೆ.

ಒಂದು ವರ್ಷದ ಎಳೆಯ ಕೂಸು "೫೦ ಪೈಸೆ ಮಾಲೆ" ಮೊನ್ನೆ ತಾನೇ ಮುಂಬಯಿ ಕನ್ನಡ ಸಹೋದರರನ್ನು ಕಂಡು ಬಂತು. ಸುಶಿಕ್ಷಿತ ಮುಂಬಯಿ ಕನ್ನಡ ಸಹೋದರರೆಂದರೆ ಕನ್ನಡಮ್ಮನಿಗೂ ಪಂಚಪ್ರಾಣ. "೫೦ ಪೈಸೆ ಮಾಲೆ"ಯನ್ನು ಕೆಲವು ಕನ್ನಡ ಸಹೋದರರು ಅತಿ ವಾತ್ಸಲ್ಯದಿಂದ ಕಂಡರು. ಎತ್ತಿ ಮುದ್ದಾಡಿದರು – ತಿನಿಸಿದರು – ಉಣಿಸಿದರು – ತನ್ನ ತೊದಲನುಡಿಯನ್ನು ಆಲಿಸಿ ಹಿರಿ ಹಿರಿ ಹಿಗ್ಗಿದರು. ಕಾರಿನಲ್ಲಿ ತಿರುಗಾಡಿಸಿದರು; ದೊಡ್ಡ ದೊಡ್ಡ ಬಂಗಲೆಯ ಪರಿಚಯ ಮಾಡಿಸಿಕೊಟ್ಟರು. ಆದರೋಪಚಾರ ನಡೆಸಿದರು. ಇನ್ನು ಹಲವರು ಕಂಡಕೂಡಲೇ ಮೂಗುಮುರಿದರು. ಕೆಲವರು ಮಗುವಿನ ಆಯುಷ್ಯ ಲೆಕ್ಕಹಾಕುವದರಲ್ಲಿದ್ದರು. ಕೆಲವರು ಕಂಡೂ ಕಾಣದಂತೆ ಜಾರಿದರು. ಕೆಲವರು ಕನ್ನಡಮ್ಮನ ಹೊಟ್ಟೆಯಲ್ಲಿ ಜನಿಸಿದರೂ ಇಂಗ್ಲಿಷ್, ಹಿಂದೀ ಇನ್ನಿತರ ವ್ಯಾಮೋಹಕ್ಕೆ ಬಲಿಬಿದ್ದು ಕನ್ನಡವನ್ನು ತಾತ್ಸಾರವಾಗಿ ಕಂಡರು.

ಎಲ್ಲವನ್ನೂ ಕಂಡುಂಡು ತನ್ನ ತಾಯ್ನಾಡಿಗೆ ಮರಳಿ, ಕನ್ನಡಮ್ಮನ ಮಡಿಲಲ್ಲಿ ಸಂತೋಷ-ದುಃಖ ಮಿಶ್ರಿತವಾಗಿ ತನ್ನ ಮುಂಬಯಿ ಸಹೋದರರು ತನ್ನನ್ನು ಕಂಡ ರೀತಿಯನ್ನು ಬಣ್ಣಿಸಿತು. ತಾಯ್ಗರುಳು ಮಿಡುಕಾಡಿತು. ಸಮಸ್ತ ಕನ್ನಡ ಸಹೋದರರು ನಿನ್ನನ್ನು ಕೈಬಿಡಲಾರರು ಮಗೂ ಆತುರನಾಗಬೇಡ ಎಂದು ತಾಯಿಯ ಅಮೃತವಾಣಿ ಮಗುವನ್ನು ಸಂತೈಸಿತು.

ತನ್ನ ಹುಟ್ಟುಹಬ್ಬದ ಸಂಚಿಕೆಯನ್ನು ಹೊರಡಿಸಬೇಕೆಂಬ ಹೆಬ್ಬಯಕೆ ಇದ್ದರೂ ಕಾರಣಾಂತರದಿಂದ ಕೈಗೂಡಲಿಲ್ಲ. ಆದರೂ ಕನ್ನಡದ ಹೆಸರಾಂತ ಬರಹಗಾರ ಪ್ರೊಫೆಸರ್ ಬಿ. ಎಚ್. ಶ್ರೀಧರ ಅವರ ಕನ್ನಡದಲ್ಲೇ ಅತ್ಯಪರೂಪ ವಿಡಂಬನ ಸಂಗ್ರಹ "ಭಾಷಣ ಭೈರವರ ಒಡ್ಡೋಲಗ" ಮಾಮೂಲಿನಂತೆ ಪ್ರಕಟಿಸಿದೆ. ಇದನ್ನು ಕನ್ನಡಿಗರು ಮೆಚ್ಚುವರೆಂಬ ಭರವಸೆ ನಮಗಿದೆ. ಎಂದಿನಂತೆಯೇ ತನ್ನ ಆರ್ಥಿಕ ಭಾರ ತಗ್ಗಿಸಲು ನೆರವಾದ ಜಾಹೀರಾತುದಾರರಿಗೂ, ತ್ವರಿತದಲ್ಲಿ ಸುಂದರವಾಗಿ ಮುದ್ರಿಸಿದ ಮಣಿಪಾಲ ಪವರ್ ಪ್ರೆಸ್ಸಿನ ಆಡಳಿತ–ಕೆಲಸಗಾರ ಬಂಧುಗಳಿಗೂ, ಲೇಖಕ ಶ್ರೀ ಬಿ. ಎಚ್. ಶ್ರೀಧರ ಅವರಿಗೂ ತುಂಬು ಹೃದಯದ ನೆನಕೆಗಳು.

ಫೆಬ್ರುವರಿ,

ಇಂತಿ ಕನ್ನಡಮ್ಮನ ಸೇವಕ,
**ಕೋಣೆ ಕೃಷ್ಣ ಭಂಡಾರಿ**
ಸಂಪಾದಕ, "೫೦ ಪೈಸೆ ಮಾಲೆ", ಉಡುಪಿ.

# "ಭಾಷಣ ಭೈರವರ ಒಡ್ಡೋಲಗ"

## ಉತ್ತರಪುರದ ಆಕಾಶ ವಾಣಿಯಿಂದ ಕಾರ್ಯಕ್ರಮಗಳು

### ಸಮಾನತೆ

೧೪೪ನೆಯ ಮೀಟರ್ ನಿಶಾಗಮ ಕಾಲ

ಮಾನ್ಯ ನಾಗರೀಕರಿಗೀಗ ಅಪೂರ್ವ ಸಂಧಿಯುಂಟಾಗಿದೆ. ನಮ್ಮ ಆಕಾಶ ವಾಣಿಯಿಂದ ವಾರವಾರದ ವಾರ್ತಾಪ್ರಸಾರ ಇನ್ನುಮೇಲೆ ಪ್ರಾರಂಭವಾಗುತ್ತದೆ. ಈ ವಾರದಲ್ಲಿ ನಮ್ಮ ವಿಶೇಷ ಸುದ್ದಿಗಾರರಿಂದ ಬಂದ ಅಮೂಲ್ಯ ಸುದ್ದಿಯನ್ನು ಈಗ ಬಿತ್ತರಿಸಲಾಗುತ್ತದೆ; ಜೊತೆಗೆ ಅವರ ಟೀಕೆ ಟಿಪ್ಪಣಿಗಳ ಚಟಾಕಿಗಳನ್ನೂ ನೀವು ಕೇಳುವಿರಿ.

ಉತ್ತರಪುರದ ನಗರಸಭೆಯಲ್ಲಿ ಒಂದು ಸ್ವಾರಸ್ಯದ ಸಂಗತಿ ಮೊನ್ನೆ ನಡೆಯಿತು. ಸ್ತ್ರೀ ಸದಸ್ಯರೊಬ್ಬರು 'ಮೀಸೆ ಹುರಿಮಾಡಿ ಮಾತಾಡುವುದು ಅಸಭ್ಯವೆನಿಸುವುದು' ಎಂದು ಅಧ್ಯಕ್ಷರೆದುರು ದೂರಿಕೊಂಡದ್ದಕ್ಕೆ ಮನ್ನಣೆಯಿತ್ತು ಎದುರು ಕುಳಿತ ಮಾತುಗಾರರು ಮೀಸೆ ಹುರಿಮಾಡುವುದನ್ನು ನಿಲ್ಲಿಸಿದರಂತೆ. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಗಂಡಸರು ಹೋರಾಡಿ ಗಳಿಸಿದ ಘನಪದವಿಯೆಂದರೆ ಇದು. ಇದಕ್ಕಾಗಿ ಎಲ್ಲ ಗಂಡಸರೂ ಹೆಮ್ಮೆಪಡಬೇಕಲ್ಲವೆ? ಪ್ರಾಯದ ಫ್ಯಾಶನ್ ಸುಂದರಿಯರು ದೇಶ ಕಾಲ ಸ್ಥಾನಭೇದವಿಲ್ಲದೆ ಮದನಚೇಷ್ಟೆ-ಮಂಗಚೇಷ್ಟೆ ಯಾವುದನ್ನು ಮಾಡಲೂ ಹಕ್ಕುಳ್ಳವರು; ಆದರೆ ವ್ಯಕ್ತಿತ್ವಸಹಜವಾದ ಮೀಸೆಯನ್ನು ಹುರಿಮಾಡುವ ಆರು ಸಾವಿರ ವರ್ಷದಿಂದ ಬಂದ ಭಾರತೀಯ ಸಂಸ್ಕೃತಿ ಹಳೆಯದಾದ ಕಾರಣದಿಂದ ಇಂದು ಅಸಭ್ಯ. ಇದರ ಮೇಲೆ ಮೀಸೆಯನ್ನು ಇಟ್ಟುಕೊಳ್ಳುವುದು ಕುರೂಪ ಎಂದು ಹೆಣ್ಣು ಹೇಳಿ ಸ್ತ್ರೀದಾಸನಾದ ಪುರುಷನು ಮೀಸೆ ಮೂಡಿದ್ದೇ ಒಂದು ಪಾಪಫಲವೆಂದು ತಿಳಿದು ಅದನ್ನು ಗುರುತು ಹತ್ತದಂತೆ ಪ್ರತಿ ಗಳಿಗೆಯಲ್ಲೂ ಬೋಳಿಸಿಕೊಂಬಂತೆ ಮಾಡಿದ ಸ್ತ್ರೀಯ ಸಾಮ್ಯವಾದ ಸಾಧನೆಗಾದ ದಿಗ್ವಿಜಯ ಹೊಸ ಪ್ರಜಾಪ್ರಭುತ್ವಕ್ಕೆ ಶೋಭೆಯನ್ನೇ ತಂದಿದೆ ಎನ್ನಬೇಕು. ಮತ್ತೂ ಒಂದು ಸ್ವಾರಸ್ಯ: ಈ ಪ್ರಕರಣ ನಡೆದದ್ದು ಒಂದು ಜೋಡಿ ಎತ್ತನ್ನು ಕೊಳ್ಳುವ ವಿಷಯವಾಗಿ ನಗರಸಭೆ ಚರ್ಚೆ ನಡೆಸುತ್ತಿದ್ದಾಗ. ಆ ಸ್ತ್ರೀ ಸದಸ್ಯರು ಬುದ್ಧಿವಂತರಾಗಿದ್ದರೆ, ಎತ್ತಿನಜೊತೆಯನ್ನೇ ಏಕೆ ಕೊಳ್ಳಬೇಕು? ಅವುಗಳ

ಬದಲು ಹಸುಗಳ ಒಂದು ಜೊತೆಯನ್ನು ಕೊಳ್ಳುವುದು ಲಿಂಗಸಾಮ್ಯ ನೀತಿಗೆ ಸಾಧಕ ಎಂದು ವಾದಿಸುವುದು ಮತ್ತಷ್ಟು ರಮ್ಯವಾಗುತ್ತಿತ್ತು. ಏಕೆಂದರೆ ಎತ್ತುಗಳು ಮಾಡುವ ಎಲ್ಲ ಕಾರ್ಯಗಳನ್ನೂ ಹಸುಗಳು ಮಾಡುತ್ತವೆ ಎಂಬುದು ಸರ್ವ ನಾಗರಿಕ ಸಮಾನತೆಯನ್ನು ಸಾರುವ ಉತ್ತರಪುರದ ರಾಜ್ಯಾಂಗ ನಿಯಮಾವಳಿ ಸಾರುತ್ತದೆ !

## ಜಪಾನೀ ಮಾದರಿಯ ಶಿಕ್ಷಣ

ಇದುವರೆಗೆ ನೀವು ನಮ್ಮ ವಿಶೇಷ ಸುದ್ದಿಗಾರರಿಂದ ವಾರದ ಗಣ್ಯವಾರ್ತೆಯನ್ನೂ ಅದರ ಮೇಲಿನ ಟೀಕೆಟಿಪ್ಪಣಿಗಳನ್ನೂ ಕಿವಿಯಿಸಿದಿರಿ. ಈಗ ಉತ್ತರಪುರದ ವಿದ್ಯಾಮಂತ್ರಿಗಳಾದ ಮಾನ್ಯ ಉತ್ತರಖರ್ ಅವರು ಶಿಕ್ಷಣದ ಬಗ್ಗೆ ನಾಲಿಗೆಯಿಸುತ್ತಾರೆ. ತಾವೆಲ್ಲರೂ ಸದ್ದುಮಾಡದೆ ಕಿವಿಯಿಂದ ಸವಿಯಬೇಕಾಗಿ ವಿನಂತಿ.

ಮಾನ್ಯ ವಿದ್ಯಾಮಂತ್ರಿ ಉತ್ತರ್‌ಖರ್‌ಅವರು—

ಮಹಿಳೆಯರೇ ಮತ್ತು ಮಹನೀಯರೇ, ಪ್ರಾಥಮಿಕ ಶಾಲೆಗಳ ಸಂಖ್ಯೆಯನ್ನು ಅತಿ ವೇಗದಿಂದ ಹೆಚ್ಚಿಸುವುದು ಸರಕಾರದ ಗುರಿ. ಸೌಂದರ್ಯ, ಸೌಕರ್ಯ ಮತ್ತು ವ್ಯಯ ಸೌಲಭ್ಯಗಳನ್ನೊಳಗೊಂಡ ಜಪಾನೀ ಮಾದರಿಯ ಶಾಲೆಗಳನ್ನು ರಚಿಸುವೆವು. ಅದರಿಂದ ಕೆಲವೇ ದಿನಗಳಲ್ಲಿ ಶಿಕ್ಷಕರ ಸಂಖ್ಯೆ ಏರುತ್ತದೆ. ಅವರ ಪಗಾರ ಏರಿಸುವ ಆಲೋಚನೆಯಿದೆ. ಅದನ್ನು ಕಾರ್ಯರೂಪಕ್ಕೆ ತರಲು ಅನೇಕ ಅಡಚಣೆಗಳಿವೆ. ಇದ್ದರೂ ಪರವಾಯಿಲ್ಲ. ಒಟ್ಟಿನ ಮೇಲೆ ವಿದ್ಯಾರ್ಥಿಗಳ, ಶಿಕ್ಷಕರ ಮತ್ತು ಶಾಲೆಗಳ ಸಂಖ್ಯೆ ಏರುವುದೇ ಮುಖ್ಯ. ಏಕೆಂದರೆ, ಪ್ರಜಾಪ್ರಭುತ್ವದಲ್ಲಿ ಸಂಖ್ಯಾಬಲವೇ ಪರಮಬಲ. ಅದೇ ಪ್ರಗತಿಯ ಮಟ್ಟವನ್ನು ಅಳೆಯುವ ಮಾನದಂಡ. ತಾಳಿಕೆ, ಬಾಳಿಕೆ, ವಿದ್ಯಾರ್ಜನೆ, ವಿದ್ಯಾದಾನಗಳು ಪ್ರಾಚೀನ ಸನಾತನ ಧ್ಯೇಯಗಳು. ಅವು ಅಪ್ರಗತಿಶೀಲ; ಅಜಪಾನೀಯ. ಬಹುಬೇಗ ಪ್ರಗತಿಯನ್ನು ಸಾಧಿಸಿದ ನಾಡುಗಳಲ್ಲಿ ಜಪಾನು ಅಗ್ರಗಾಮಿ. ಆದುದರಿಂದ ಅಲ್ಲಿಯವರಂತೆಯೇ ನಾವಾಗಬೇಕು. ಸತತವಾದ ಜುಜುತ್ಸು ಮೊದಲಾದ ವಿದ್ಯೆಗಳಿಂದ ನಾವು ವಾಮನತ್ವವನ್ನು ಮೊದಲು ಸಾಧಿಸಿಕೊಳ್ಳಬೇಕು. ಆಗ ಗುಬ್ಬಿಯ ಗೂಡಿನಂಥ ಅತಿ ಕಡಿಮೆ ಖರ್ಚಿನ ಮನೆಗಳಲ್ಲಿ ವಾಸಮಾಡಲು ನಾವು ಶಕ್ತರಾಗುತ್ತೇವೆ. ಅದರಿಂದ ಹಣ ಉಳಿಯುತ್ತದೆ; ಆರ್ಥಿಕ ಸಮಸ್ಯೆ ನಿಮಿಷಾರ್ಧದಲ್ಲಿ ಬಗೆಹರಿಯುತ್ತದೆ. ಅದರಲ್ಲೂ ಬಿದಿರಿನ ಮನೆಗಳನ್ನೇ ಕಟ್ಟಿಸಬೇಕೆಂದು ಸರಕಾರ ಯೋಚಿಸಿದೆ. ಶಾಲೆಗಳಿಗೂ ಅವೇ ಯೋಗ್ಯ. ಭೂಕಂಪದಿಂದ ಆಗ ನಮ್ಮ ಕಟ್ಟಡಗಳಿಗೆ ಹಾನಿ

ಯಾಗದು: ಆದರೂ ಬಹಳ ನಷ್ಟ ಸಂಭವಿಸದು. ಬಹು ದಿವಸ ಬಾಳುವ ಮತ್ತು ವ್ಯಯದಾಯಕ ಕಟ್ಟಡಗಳು ನಮ್ಮ ವಿದ್ಯಾಭ್ಯಾಸದ ಮಟ್ಟವನ್ನು ಏರಿಸಲಾರವು ಅದೇಕೆಂದರೆ ಬಹಳ ಕಲಿತ ಶಿಕ್ಷಕರನ್ನು ಬಹಳ ಪಗಾರದ ಮೇಲೆ ನಿಯಮಿಸಿ ಕೊಂಡು ಬಹಳ ಕಾಲ ಶಿಕ್ಷಣ ಕೊಡಿಸಲು ಹೊರಟರೆ ವಿದ್ಯಾರ್ಥಿಗಳು ಬಹಳ ಕಾಲ ಬಾಳುವ ಅಪ್ರಗತಿಶೀಲ ಮಾರ್ಗವನ್ನು ಕಲಿತಾರು: ಬಹಳ ಬುದ್ಧಿವಂತ ರಾಗಿ ಸರಕಾರವನ್ನೇ ಉರುಳಿಸಿಯಾರು. ಪ್ರತಿ ಕ್ಷಣವೂ ಹೊಸತನ್ನು ಕಾಣುವುದೇ ನಿಜವಾದ ನವನಾಗರಿಕತೆ. ಹಾಗೆಂದು ನಾಳೆ ನಾನು ಈ ಆಕಾಶವಾಣಿಯಲ್ಲಿ ಮಾತಾಡ ಬಂದರೆ ಹಳಬನೆಂದು ಕಿವಿ ಮುಚ್ಚಿಕೊಳ್ಳಕೂಡದು. ನಾನು ಹಳಬ ನಾಗುವೆನಾದರೂ ನನ್ನ ಅಭಿಪ್ರಾಯಗಳೆಲ್ಲ ಹಳೆಯವೆನಿಸಿದರೂ ಕಾಲ ಹೊಸದು ಮಾತುಗಳು ಹೊಸವು ಎಂಬುದನ್ನು ಮರೆಯಕೂಡದು. ಗುಡ್ ನೈಟ್ ಮೈ ಸ್ವೀಟ್ ಸಿಟಿಜನ್ಸ್!

## ಭಾರತ ವಾಚನ

ಈಗ ೧೯೬೬ನೆಯ ಮೀಟರಿನಲ್ಲಿ ವೇಗನೆ ಭಾರತವಾಚನ ಮಾಡಲಾಗುತ್ತದೆ. ಏಕೆಂದರೆ ಆಗಲೇ ಬೆಳಗಾಗುತ್ತ ಬಂದಿತು. ಗಡಿಬಿಡಿಗಾಗಿ ಮಹಾಜನರು ಕ್ಷಮಿಸ ಬೇಕು. ವಾಚಕರು ಶ್ರೀ ಉತ್ತರಾನಂದಾಚಾರ್ಯರು—

ಶ್ರೀವನಿತೆಯ ಮುಖಾರವಿಂದದ
ಭಾವನಿರ್ಭರ ರಮ್ಯತೆಯು ತಾ
ನೋವಿ ಕೊಟ್ಟಣು ದೇಶಕಲ್ಲಿಂದನ್ನ ವಾನು ತಂದು ।
ಭಾವಿಕರಿಗೊಲಿದಿತ್ತು ಪೊರೆಯುವ
ದೇವ ಕಲ್ಮತರಾಯನುರೆ ಮುಂ
ಜಾವದಲ್ಲಿಡ್ತಲಿಯ ತಪ್ಪದೆ ಕರುಣಿಸಲಿ ನಿಮಗೆ ॥
ಹೆಂಡಿರಿಬ್ಬರ ಮಾಡಿಕೊಳದಿರು.
ದಿಂಡುಗೆಡೆಯೊ ಜಮೀನುದಾರರ,
ದಂಡಿಸಲ್ಲಿ ವಿಚಾರಿಸದೆ ವಿಪ್ರಪಕ್ಷದವರನ್ನು ।
ಗಂಡಗರಿಯದೆ ಪರನ ಕೂಡುವ
ಮುಂಡೆಗಾರ್ತಿಯ ಶಿಕ್ಷಿಸದಿರು. ಪ
ಲಾಂಡು ಭಕ್ಷ್ಯರನಷ್ಟೆ ಕಾಲೇಜೊಳಗೆ ಬಿಡು ಬಂದು ॥
ಗಂಡುಗಲಿತನದುತ್ತರಾಪುರ
ದುಂಡು ಸುಖಿಸುವ ರಾಜಧರ್ಮದ

ಮಂಡಿತರು ಕಾಯಿದೆಗಳನು ಮಾಡಿರಲು ಮನದಂತು
'ಚಂಡಶಾಸನ ! ಪಂಕ್ತಿಭೇದದ
ಬಂಡುಗಾರಿಕೆ !' ಎಂದು ನಾಗರ
ರಂಪಲೆದು ಹತ್ತಿದರು ಕೋರ್ಟಿನ ಕಟ್ಟೆಯನು ಬಿಡದೆ ॥
ಜನಪ ಜನಮೋಹಿಯುತ ಮುಖಂಡರ
ಕನಕಕಾರಿಸಿ ಮನೆಯ ಕಾಯುವ
ವನಜಮುಖಿ ಕಲ್ಕತ್ತಪುರಾಧಿಪ ಕಾವಲಿರುವಾಗ ।
ಮನೆಯೊಳಗೆ ನಾಯರ್ ನುಗ್ಗುವಂತೆ ಪ್ರೊ
ಲನಿತರಲಿ ಹೈಕೋರ್ಟಿನಪ್ಪಣೆ
ಜಿನುಮಯರು ರಚಿಸಿರ್ದ ಶಾಸನಗಳನು ಖಂಡಿಸಿತು ॥

ಏನ ಹೇಳಲಿ ರಾಜ್ಯಘಟನೆಯ
ಮಾನವುಳಿಸಲು ಛಲವ ತೊಟ್ಟ ಮ
ಹಾನುಭಾವ ನಿರುತ್ತರೀಕೃತ ಭೂಪ ಸಿಡಿದೆದ್ದು ।
ತಾನು ರಚಿಸಿದ ಘಟನೆಯನ್ನನು
ಮಾನಿಸದೆ ಬದಲಿಸಲು ಹೊರಟನು
ಜಾಣಗತಿಯಲಿ: ಹೊಗಳಿರೋ ಶಾಸನ ಪರಾಕ್ರಮನ ॥

ಘಟನೆ ಹೋಳಿಯ ಕಾಮನಂತಿದೆ.
ಘಟಿಸಿದುದು ಪುಣ್ಯದ ಮೂರ್ತಿಯ:
ನಟಿಸ ಮೊಗನು ತಿದ್ದುವುದು ದುಷ್ಕಾರ್ಯವೇನೆಂದು ।
ಚಟಪಟಿಸಿ ಸಂಸತ್ತುದಸ್ತುರ
ಶತಶಿರವ ಪರಿವರ್ತಿಸಿದ ! ಸಂ
ಕಟದ ಸಂಕಟತರಮಣಾನುತ್ತರಭೂಪ ಶಾಸನ್ತೀ ॥

ಮತ್ತೆ ಕುಳಿತರು ಶಾಸಕರು ತ
ಮ್ಮುತ್ತಮಾಂಗವ ತುರಿಸಿಕೊಳ್ಳುತ;
ಒತ್ತಿಹೋಗಲು ಮೊಗಘಟನಾ ಮದನಮೂರುತಿಯು ।
ಕಿತ್ತುಹೋದವು ಕಂಗಳೆರಡೂ
ಚಿತ್ತಹಿಡಿದೊದರಿದರು ಬಾರಪ್ರ—
ಚಿತ್ತವಿಸು. ತಿರುಮುರುಗ ಬಿದ್ದಿತು ತಾಳದಾಯೆಂಟು ॥
ನಾನೆ ಘಟನೆ ! ಇದೇಕೆ ಈ ದುರ್

ಧ್ಯಾನಮಯ ಲಿಪಿಜಾಲವೆಂದು ಕ
ಮಾನು ಟೋಪಿಯ ಮುಖ್ಯಮಂತ್ರಿ ಕದನ್ನದಾತಾರ ।
ನಾನೆ 'ನಾ ವಿಷ್ಣುಃ ಪೃಥಿವಿಪತಿ'
ಕಾಣಿರೇನೆಂದಬ್ಬರಿಸೆ ನಿ
ರ್ವಾಣವಾಯ್ತು ನವೀನಯುಗ ರಾಷ್ಟ್ರೀಯ ಜೀವನದ ॥

# ಅಕ್ಕಿ ತಿಂಬವರಿಗೆ ಮಕ್ಕಳು ಹೆಚ್ಚು

೧೪೪ನೆಯ ಮೀಟರ್ ನಿಶಾರಂಭ

ಇದೀಗ ವಿದೇಶದಿಂದ ಬಂದ ವಿಜ್ಞಾನತಜ್ಞರಾದ ಚಂದ್ರಸೂಕರನ್ನರು ಅಕ್ಕಿ ಮತ್ತು ಮಕ್ಕಳು ಎಂಬ ವಿಷಯದಮೇಲೆ ಸಮಾಜಶಿಕ್ಷಣಾರ್ಥ ಭಾಷಣ ಮಾಡುತ್ತಾರೆ. ಬಹುಮಾನ್ಯ ಚಂದ್ರಸೂಕರನ್ನರು:

"ಉತ್ತರಪ್ರರದ ಜನಗಣನೆಯಲ್ಲಿ ಅಕ್ಕಿ ತಿಂಬವರಿಗೆ ಮಕ್ಕಳು ಹೆಚ್ಚು ಎಂದು ಕಂಡುಬಂದಿದೆ. ಗೋದಿ ತಿಂಬವರಿಗೆ ತೀರ ಕಡಿಮೆ. ಆದುದರಿಂದ ಇನ್ನುಮೇಲೆ ಎಲ್ಲರೂ ಗೋದಿ ತಿಂದು ಮಕ್ಕಳ ಉತ್ಪಾದನೆಯನ್ನು ಕಡಿಮೆ ಮಾಡುವುದೊಂದೇ ಆಹಾರ ಸಮಸ್ಯೆಯ ವೈಜ್ಞಾನಿಕ ಉಪಾಯ. ಇದರ ಜೊತೆಗೆ ಅನ್ನಭಕ್ಷಕರಲ್ಲಿ ಸ್ತ್ರೀಯರ ಸಂಖ್ಯೆಯೂ ಜಾಸ್ತಿ. ಆದರಿಂದ ಸ್ತ್ರೀ ಸಮಸ್ಯೆ ಹೆಚ್ಚು. ಅವರ ಬೆಲೆ ತಗ್ಗಿ, ಸ್ತ್ರೀಮರ್ಯಾದೆ ಇಳಿದುಹೋಗುವುದು. ಅನ್ನವನ್ನು ಬಿಡಲು ಇದೂ ಒಂದು ಮಹತ್ವದ ಕಾರಣ. ವರದಕ್ಷಿಣೆಯ ಅನ್ಯಾಯವನ್ನು ತಪ್ಪಿಸಬೇಕಾದರೆ ಸ್ತ್ರೀಯರು ತಮ್ಮ ಸಂಖ್ಯೆಯನ್ನು ಕಡಿಮೆಮಾಡಿಕೊಳ್ಳಬೇಕು. ಅಕ್ಕಿಯಿಂದ ಪುರುಷರ ಬುದ್ಧಿಚಾತುರ್ಯ ಬೇಕಾದ ಪ್ರಮಾಣಕ್ಕಿಂತ ಹೆಚ್ಚುವುದು. ಆಗ ಅವರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸ್ತ್ರೀಯರಿಗೆ ಸಾಧ್ಯವಾಗದು. ಆದುದರಿಂದ ಗೃಹಿಣಿಯರು ಅಕ್ಕಿಯ ಬಳಕೆ ಮನೆಯಲ್ಲಿ ಕಡಿಮೆಮಾಡುತ್ತ ಹೋಗಬೇಕು. ಅನ್ನಾದ್ಭವಂತಿ ಭೂತಾನಿ – ಅಂದರೆ ಅನ್ನದಿಂದ ಭೂತಗಳು ಹುಟ್ಟುತ್ತವೆ ಎಂದು ಗೀತೆಯಲ್ಲಿ ಹೇಳಿದೆ. ಎಂದಮೇಲೆ ಯಾರಾದರೂ ಇನ್ನು ಮೇಲೆ ಅನ್ನ ತಿನ್ನಲು ಮನಸ್ಸುಮಾಡಿಯಾರೇ? 'ಅನ್ನವನು ಇಕ್ಕುವುದು' ಎಂದ ಸರ್ವಜ್ಞನ ಮಾತಾದರೂ ಅನ್ನವನ್ನು ಅನ್ಯರಿಗೆ ಹಾಕಬೇಕಲ್ಲದೆ ತಾವು ತಿನ್ನಬಾರದು ಎಂಬುದನ್ನೇ ಸಾರುತ್ತದೆ. ಅಕ್ಕಿಯು ಮಾನವನ ಶತ್ರು. ಅಕ್ಕಿಯಿಂದಲೇ ಸರ್ವ ದುಃಖ, ಭತ್ತದಿಂದಲೇ ಕುತ್ತು. ಆದುದರಿಂದ ಆಧುನಿಕರೂ ಸುಸಂಸ್ಕೃತರೂ ಫ್ಯಾಶನ್ ಬಲ್ಲಿದರೂ ಆದ ನಮ್ಮ ಪ್ರಜೆಗಳಿಗಿನ್ನು ಅಕ್ಕಿಯನ್ನು ತಿನ್ನುವುದು

ಒಳ್ಳೆಯ ಫ್ಯಾಶನ್ ಎನಿಸಲಾರದು. ಅಕ್ಕಿ ತ್ಯಾಗಮಹೋತ್ಸವಗಳನ್ನು ಅನ್ನ ಬಹಿಷ್ಕಾರ ಪರಿಷತ್ತುಗಳನ್ನೂ ನಡೆಸಿ ಸರಕಾರವು ಆಹಾರ ಮತ್ತು ಇತರ ಸಮಸ್ಯೆಗಳನ್ನು ಬಗೆಹರಿಸುವುದು ಕ್ರಮ ಪ್ರಾಪ್ತ. ಅದಕ್ಕೆ ನೀವೆಲ್ಲ ತನು ಮನ ಧನ ಉದರಗಳಿಂದ ನೆರವಿತ್ತು ಸಹಕರಿಸಬೇಕು. ಅಕ್ಕಿಯು ಹತವಾಗಲಿ!"

## ನೂತನ ಪ್ರಜಾಪ್ರಭುತ್ವ ಕುಟುಂಬ ಪದ್ಧತಿ

ಇಲ್ಲಿಯ ವರೆಗೆ ತಾವೆಲ್ಲ ಅಕ್ಕಿವಿಜ್ಞಾನಿ ಚಂದ್ರಸೂಕರರ ವೈಜ್ಞಾನಿಕ ಭಾಷಣ ಕೇಳಿದಿರಿ. ಇನ್ನುಮುಂದೆ ೧೪ನೆಯ ಮಿಂಟರಿನಲ್ಲಿ ಲಂಡನ್ನಿನಲ್ಲಾದ ಸಾಮಾಜಿಕ ಪರಿಷತ್ತಿನ ಮುಖ್ಯಾಂಶಗಳನ್ನು ನಮ್ಮ ವಿಶೇಷ ಪ್ರತಿನಿಧಿ ಘೋಷರು ಈಗ ಚಿತ್ರಿಸುತ್ತಾರೆ. ಮಾನ್ಯ ಘೋಷರು, 'ಮಯೋನೀಯುರ್' ಪತ್ರಿಕೆಯ ಕಚೇರಿಯವರು — "ನಿಜವಾದ ಪ್ರಜಾಪ್ರಭುತ್ವ ಪದ್ಧತಿಯಂತೆ ನಡೆಯುವ ಕುಟುಂಬದಲ್ಲಿ ಗಂಡನು ಹೆಂಡತಿಯ ಜೊತೆಗೆ ಸಮಪಾಲುಗಾರನಾಗಿರಬೇಕು. ಚಿಕ್ಕ ಮಕ್ಕಳ ಮಲಿನ ವಸ್ತ್ರಗಳನ್ನು ತೊಳೆಯುವಂತಹ ಕ್ಷುದ್ರಕಾರ್ಯಗಳಲ್ಲಿ ಕೂಡ ಅವನು ಭಾಗವಹಿಸಬೇಕು ಎಂದು ಪರಿಷತ್ತು ತೀರ್ಮಾನಿಸಿದ್ದು ಅಭಿನಂದನೀಯ. ಹೊಸ ವೈಜ್ಞಾನಿಕ ಸಂಶೋಧನೆಗಳಿಂದ ಗರ್ಭಧಾರಣೆಯನ್ನು ಕೂಡ ೪॥ ತಿಂಗಳು ಗಂಡನೂ ೪॥ ತಿಂಗಳು ಹೆಂಡತಿಯೂ ನಡೆಸುವಂತೆ ಮಾಡಲಾದೀತು. ಬೀಜ ಅಥವಾ ಜನಿಯ ತಯಾರಿಕೆಯಲ್ಲಿ ಸ್ತ್ರೀಯೂ ಪಾಲುಗಾರಳಾಗಬೇಕೆಂದು ಪುರುಷರು ಹಟಮಾಡುವುದಾದರೆ ಅದು ಪಾಶವಿ, ಅನಾಗರಿಕ, ಅರಸಿಕ ಎನಿಸುತ್ತದೆ. ಪುರುಷ ಕಾರ್ಯಗಳು ಪುರುಷನವೇ. ಅವನು ಅದರ ಮೇಲೆ ಸ್ತ್ರೀ ಕಾರ್ಯಗಳಲ್ಲಿ ಅರ್ಧಭಾಗ ವಹಿಸಿಕೊಂಡರೇನೇ ಸದ್‌ಗಂಡನೆನಿಸುತ್ತಾನೆ. ದುಡಿಮೆಯಲ್ಲಿ ಪುರುಷನ ಪಾಲು ೧॥, ಸ್ತ್ರೀಯದು ಅರ್ಧ. ಲಾಭದಲ್ಲಿ ಅವನಿಗೆ ಸ್ತ್ರೀ ಸಮವಾದ ಪಾಲು. ಇದೇ ನೂತನ ಪ್ರಜಾಪ್ರಭುತ್ವ ಘಟಿತ ಕುಟುಂಬ ಪದ್ಧತಿಯ ಜೀವಾಳ: ಆದಿಶಕ್ತಿ, ಆದಿ ಮಾತೆ, ಅನುಪಮ ಸುಂದರಿಯಾದ ಸ್ತ್ರೀಗೆ ಪಶುಜಾತ ಪುರುಷನು ಸಲ್ಲಿಸಬೇಕಾದ ಕಾಣಿಕೆ.

"ಇನ್ನೊಂದು ವಿಚಾರ: ನನ್ನ ಜೊತೆಯ ಉತ್ತರಪುರ ಪ್ರತಿನಿಧಿಗಳು ನಮ್ಮವರ ಹಿಂದುಳಿದ ಆಚಾರಗಳನ್ನು ಸತ್ಯರೀತಿಯಲ್ಲಿ ಹೇಳಹೋಗಿ ಮರ್ಯಾದೆ ತೆಗೆಯುವುದರಲ್ಲಿದ್ದರು. ಅವರ ಅನಾಗರಿಕತೆಯನ್ನು ನಿವಾರಿಸಿ ವಿದೇಶೀಯರೆದುರು ನಮ್ಮ ಮಾನ ಕಾಯ್ದುಕೊಳ್ಳಲೆಂದು ನಾನು ನಮ್ಮ ಸ್ತ್ರೀಯರೆಲ್ಲರೂ ಬೀಡಿ ಸಿಗರೇಟು ಸೇದುತ್ತಾರೆ: ಸಿಕ್ಕವರೊಡನೆಲ್ಲ ಕೈ ಕೈ ಹಿಡಿದು ಕುಣಿಯುತ್ತಾರೆ; ಲಂಗವನ್ನು ಹಾಕಲು ಕಲಿಯುತ್ತಿದ್ದಾರೆ: ಮಕ್ಕಳನ್ನು ದಾಸಿಯರ ಕೈಗಿತ್ತು

ಕ್ಲಬ್ಬುಗಳಿಗೆ ಹೋಗಿ ಬೇಕಾದಷ್ಟು ಕುಡಿಯುತ್ತಾರೆ. ಯಥೇಷ್ಟ ವಿವಾಹ ವಿಚ್ಛೇದ ಮಾಡಿಕೊಳ್ಳುತ್ತಾರೆ: ಮೂರು ಹೊತ್ತೂ ಸಿನೆಮ ಮಂದಿರಗಳಲ್ಲೇ ಇರುತ್ತಾರೆ; ಇಷ್ಟೇ ಅಲ್ಲ, ಅವರು ಗಂಡಂದಿರನ್ನು ಎಲ್ಲೆಂದರಲ್ಲಿ ಬೈದು, ಥಳಿಸಿ, ನಗೆಗೀಡುಮಾಡಿ ಸೆಟೆದುಕೊಂಡು ತಿರುಗುತ್ತಾರೆ – ಎಂದು ವರ್ಣಿಸಿ ನಾವೂ ಇಂಗ್ಲಿಷ್ ಮತ್ತು ಅಮೇರಿಕನ್ ಜನರಷ್ಟೇ ಅಥವಾ ಅವರಿಗೂ ಒಂದು ಕೈ ಹೆಚ್ಚು ಮುಂದುವರಿದವರೆಂಬುದನ್ನು ತೋರಿಸಿಕೊಟ್ಟೆ.

"ಇದರಿಂದ ಉತ್ತರಪುರದ ಪ್ರಜೆಗಳು ಕಲಿಯಬೇಕಾದ ಪಾಠವೆಂದರೆ. ನಾಳಿನಿಂದ ಕುಟುಂಬಕ್ಕಾಗಿ ಧನಾರ್ಜನೆಮಾಡುವುದರ ಜೊತೆಗೆ ತಮ್ಮ ಅವಲಂಬಿಗಳಾದ ಕೌಟುಂಬಿಕರ-ಅದರಲ್ಲೂ ಹೆಚ್ಚಾಗಿ ಹೆಣ್ಣುಮಕ್ಕಳ–ಮಲಿನ ವಸ್ತ್ರ ತೊಳೆಯುವ ಮುಂತಾದ ಕಿಂಕರಕಾರ್ಯದಲ್ಲಿ ತೊಡಗಿ ಪ್ರಜಾಪ್ರಭುತ್ವದ ಸ್ವತಂತ್ರ ನಾಗರಿಕತೆಯನ್ನು ಅಳವಡಿಸಿಕೊಳ್ಳುವುದೇ ನೂತನ ಪ್ರಜಾಪ್ರಭುತ್ವದ ಕುಟುಂಬ ಪದ್ಧತಿ !"

೧೪೯ನೆಯ ಮೀಟರ್ ನಿಶಾಂತ

ಈವರೆಗೆ ನೀವೆಲ್ಲ ವಿದೇಶಕ್ಕೆ ಹೋಗಿಬಂದ ನಮ್ಮ ವಿಶೇಷ ಪತ್ರಿಕಾ ಪ್ರತಿನಿಧಿ ಘೋಷರ ಅಮೂಲ್ಯ ಭಾಷಣವನ್ನು ಆಲಿಸಿದಿರಿ. ಇನ್ನುಮುಂದೆ ಉತ್ತರ ಭಾರತದ ವಾಚನ ಪ್ರಾರಂಭವಾಗುತ್ತದೆ. ಎಲ್ಲರೂ ತಮ್ಮ ತಮ್ಮ ಪಂಚೇಂದ್ರಿಯಗಳನ್ನು ತೆರೆದುಕೊಂಡು ರಸಾಸ್ವಾದಕ್ಕೆ ಸಿದ್ಧರಾಗಿರಿ.

ಭಾ.।ಷ.

ಶ್ರೀಜನಕ ಯಂತ್ರಗಳನಿಟ್ಟಿಹ
ಘೋಜನೋದ್ಯಮಿಗಳನು ಸಾಕುವ
ರಾಜಕೀಯ ರಮಾವಿಲಾಸದ ನಾಗರಿಕಕುಲದ ।
ರೋಜವೆಸಿಸಿದ ಮಂತ್ರಿಸಂಪುಟ
ಮೋಜಿ ಬೆಳಗುವ ವಿದ್ಯುದಾವಳಿ
ರಾಜಿಸುವ ಬೀದಿಯಲಿ ಕಲ್ಪತರಾಯ ಬಿದ್ದಿರಲಿ ॥ ೧ ॥

ವಾ.।ಷ,

ಕೋರ್ಟುಗಳು ಕೀರ್ತಿಸಿದವುನ್ಮತ್ತರಂದದಲಿ
ಪಾರ್ಟಿಗಳು ಕೂರ್ಜಿಸಿದವುದ್ದಂಡರಂದದಲಿ
ಕಾರ್ಟೂನಿನಾರ್ಟಿನಿಂ ಪತ್ರಿಕೆಗಳೆಲ್ಲವೂ ಬೈದು ಸರಕಾರವನ್ನು ।
ಪಾರ್ಟುಫೇಲಿಸತೊಡಗಲದರಿಂದ ಸಿಡಿದೆದ್ದು
ಪಾರ್ಟಿಯರ ಮುಖ್ಯಸಚಿವೇಂದ್ರನುತ್ತರಪುರದ
ಚಾರ್ಟರನೆ ರಾಜ್ಯಾಂಗವದಲು ಬದಲಿಸಲೆದ್ದನೇನೆಂಬೆನಚ್ಚರಿಯನು ॥ ೨ ॥

ಎಲ್ಲಿ ಭೂಧಾರರಿಂಗಡೆಯುಂಟೋ ಘಟನೆಯು
ಲ್ಲೆಲ್ಲಿ ವಾಕ್‌ಸ್ವಾತಂತ್ರ್ಯಪತ್ರಿಕೆಗಳಿಂಗುಂಟೆ
ದೆಲ್ಲಿ ಜಾತೀಯತೆಗೆ ಬಂದು ಕಟ್ಟುಗಳುಂಟೋ ಎಲ್ಲಿ ಹಗೆಗಳನು ಹಿಡಿದು ।
ಎಲ್ಲವ ವಿಚಾರಣೆಗೆ ನಿಲ್ಲಿಸದೆ ಶಿಕ್ಷಿಸಲು
ಬಲ್ಲಿದರಿಗಡೆಯಿಲ್ಲದಾಗಿಹುದೋ ಅಲ್ಲೆಲ್ಲ
ಕಲ್ಲಿಟ್ಟು ಕಲ್ಮರಿಸ ಹೊರಟ ಭೂಪನ ಕತೆಯ ಕೇಳಿ ಕಲ್ಲಾಗಿರೆಲ್ಲ ॥ ೩ ॥
ಉತ್ತರಾಪುರದೊಡೆಯ ಮುಖ್ಯಮಂತ್ರೀಶ ಕೊ
ಟ್ಟುತ್ತರಕ್ಕುತ್ತರವ ಕೊಡಬಲ್ಲನಾವನವ?
ಕತ್ತಿಗೂ ಕೋವಿಗೂ ಅಣುಬಾಂಬುಗೀಂಬಿಗೂ ಮೀರ್ದ ಮಾತುಗಳನುಗಿವ ।
ಉತ್ತಮ ಸದಸ್ಯರೆಲ್ಲರು ನಿರುತ್ತರರಾಗೆ
ಮತ್ತಿತರ ಜನರು ಹೆಪ್ಪಳಿಸಿ ನಿಟ್ಟುಸಿರುಬಿಡೆ
ಹೊತ್ತುಸಾಗಲು ಕೊಡದೆ ಬಿಲ್ಲನ್ನು ಬಾಣಿಸಿದ ಮಂತ್ರಿಮಾರ್ತಾಂಡತೇಜ ॥ ೪ ॥

ಭಾ.।ಪ.

ಬಿಲ್ಲು ರಾಜ್ಯಾಂಗದಲ್ಲಿ ಸೇರಲು
ಖುಲ್ಲರಿಗೆ ಬಾಯ್‌ಬೀಗ ಬಿಡಿಯುವು
ದಲ್ಲದಹುದೆಂಬವರಿಗಲ್ಲದ ಗುಳಿಗೆ ತಿನಿಸುವುದು ।
ಹಲ್ಲುಮೀರಿದ ಟೀಕೆ ಮಾಡುವ
ಹೊಲ್ಲಹಕ್ಕಿನ ಮೂಲಭೂತವ
ಪಲ್ಲಟಿಸಿದುತ್ತುಂಗನಿಗೆ ಜಯವೆನ್ನಿರೋ ಕೂಗಿ ॥ ೫ ॥

## ಪಂಚವಾರ್ಷಿಕ ಯೋಜನೆ

### ೧೪ನೆಯ ಮೀಟರ್ ನಿಶೋದಯ ಕಾಲ

'ಉತ್ತರಪುರದ ಇತಿಹಾಸದಲ್ಲೇ ಅಪೂರ್ವವಾದ ಪಂಚವಾರ್ಷಿಕ ಯೋಜನೆ' ಎಂಬ ವಿಷಯವಾಗಿ ಮಾನ್ಯ ಪ್ರಧಾನಮಂತ್ರಿ ಉತ್ತರಭೂಪರಿಂದು ಭಾಷಣ ಮಾಡುತ್ತಾರೆ; ಇದೀಗ ಅದು ಪ್ರಾರಂಭವಾಗುತ್ತದೆ. ಎಚ್ಚರಿಕೆಯಿಂದ ಕೇಳೋಣವಾಗಲಿ. ಮಾನ್ಯ ಉತ್ತರಭೂಪಜೀ ಅವರು:

"ಸನ್ಮಾನ್ಯ ಮಹಿಳೆಯರೇ. ಮಹನೀಯರೇ, ನಮ್ಮ ಯೋಜನೆ ಭೂಮ್ಯಾಕಾಶದಷ್ಟು ವಿಸ್ತಾರವಾದದ್ದು. ಅದರ ಖರ್ಚೆಷ್ಟು ಗೊತ್ತುಂಟೋ? ೧೯೫ ಕೋಟಿ ರೂಪಾಯಿ. ೧೫ ಆಣೆ. ೧೧ ಕಾಸುಗಳು! ಇದರ ಮೇಲೆ ಮಾಂಡಲಿಕ

ಸರಕಾರಗಳಿಂದ ೮೧ ಕೋಟಿ ನಮ್ಮ ಖರ್ಚಿಗೆ ದೊರಕುವುದು. ಬಂಡವಾಳದ ಪೇಟೆಯಿಂದ ೪೨೯ ಕೋಟಿ ಬರುತ್ತದೆ. ೪೪೦ ಕೋಟಿ ಸಾಲ ಇದೆ ಅಂತೀರಾ? ಇದ್ದರೆ ಅದರ ಪಾಡಿಗದು ಬಿದ್ದಿರುತ್ತದೆ. ನಮಗೇನು, ನಿಮಗೇನು? ಇಷ್ಟಾದರೂ ೨೯೦ ಕೋಟಿ ಕಮ್ಮಿಬೀಳುತ್ತೆ ಅಂತೀರಾ? ಅದು ಹೇಗಾದರೂ ಆಗುತ್ತೆ. ಈ ಪ್ಲಾನೆಂದರೆ ಎಲ್ಲಾ ಇಜಮ್ಮುಗಳನ್ನೂ ಕರಗಿಸಿ ಭಟ್ಟಿ ಇಳಿಸಿದ್ದು. ಇದು ಜಯಪ್ರದವಾಗಬೇಕಾದರೆ ಕೆಳಗಿನ ಶರ್ತಗಳು ಕೂಡಿ ಬರಬೇಕು:

೧. ಸಾಮಾನುಗಳ ಬೆಲೆ ಇಳಿಯಬೇಕು. ಆದರೆ ಬೆಲೆಗಳಲ್ಲಿ ತಾರತಮ್ಯ ಬಹಳ ಉಳಿಯಬಾರದು–ಬಹಳವಲ್ಲ, ಏನೂ ಉಳಿಯಬಾರದು. ಗೊತ್ತಾಯಿತೆ?

೨. ಅವರಿವರ ಉಪಕಾರಕ್ಕಾಗಿ ಸಾಲಕೊಡುವುದನ್ನು ನಿಲ್ಲಿಸಿಬಿಡಬೇಕು. ಸರಕಾರದಿಂದ ಇನ್ನುಮೇಲೆ ಯಾರೂ ಏನನ್ನೂ ಕೇಳೋಹಾಗಿಲ್ಲ. ಗಿರಣಿ, ಕಾರಖಾನೆ, ಕಂಪೆನಿಗಳು ಸಂಬಳ ಇಳಿಸಬೇಕು. ಬೋನಸ್ ಕಡಿಮೆ ಮಾಡಬೇಕು. ಕೂಲಿ ದರ ತಗ್ಗಿಸಬೇಕು. ಇಲ್ಲದೆಹೋದರೆ ರೊಕ್ಕ ಕೂಡಿಬರುವುದು ಹೇಗೆ?

೩. ಕಂಟ್ರೋಲು ಹೆಚ್ಚಬೇಕು: ಗ್ಯರಾಡಳತೆ ಹೆಚ್ಚಾದರೆ ಅದಕ್ಕೆ ಸರಕಾರ ಹೊಣೆಯಲ್ಲ.

೪. ಜಾಯಿಂಟ್ ಸ್ಟಾಕ್ ಕಂಪೆನಿಗಳುಡಿವಿಡೆಂಟ್ ಕೊಡೋದು ಕಡಿಮೆ ಮಾಡಿ ಕರ ಹೆಚ್ಚು ಹೆಚ್ಚು ಕೊಡುತ್ತಹೋಗಬೇಕು.

ಬಿಟ್ಟಿನ ಮೇಲೆ ನೀವೆಲ್ಲ ಹೊಟ್ಟೆ ಕಟ್ಟಬೇಕು. ಮಧ್ಯವರ್ಗವಂತೂ ಹೊಟ್ಟೆಗೆ ಬೆಲ್ಟನ್ನೇ ಬಿಗಿಯಬೇಕು: ಕೂಲಿಕಾರರು ಧೋತ್ರ (ಹಳೆಯದು, ಹೊಸದು ಸಿಗೋಹಾಗಿಲ್ಲ) ಸುತ್ತಿಗೋಬೇಕು, ಹೊಸೆದು ಹುರಿಮಾಡಿ – ತಿಳಿಯಿತೇ? ಇದಕ್ಕೆ 'ತ್ಯಾಗ' ಎಂದು ಹೇಳಿದ್ದಾರೆ ಮಹಾತ್ಮರು! ಮಹಾತ್ಮರ ಮಾತೆಂದಾದರೂ ನೀವು ಮೀರಲು ಮನಸ್ಸುಮಾಡೀರೇ? ಸರ್ವಥಾ ಇಲ್ಲ. ಆದುದರಿಂದ ಪ್ಲಾನಿನ ಜಯಾಪಜಯ ನಿಮ್ಮ ಕೈಯಲ್ಲೇ ಇದೆ – ಅಂಗೈ ಒಳಗಿನ ನೆಲ್ಲಿಕಾಯಿ ಅಂತಾರಲ್ಲ ಹಾಗೆ. ನೆಲ್ಲಿಕಾಯಿ ಅಂದಕೂಡಲೆ ತಾವಾರೂ ತಾತ್ಸಾರ ಮಾಡಬಾರದು. ಅದರ ಉಪಯೋಗದ ಬಗ್ಗೆ ಅಮೇರಿಕದ ಅಮರಸನ್ ಎಂಬ ವಿಜ್ಞಾನಿ ಬಹಳವಾಗಿ ಹೇಳಿದ್ದಾನೆ. ಅದರಿಂದಲೇ ಈ ಪ್ಲಾನು ಹೊರಟದ್ದು ಎಂದರೆ ಯಾರೂ ಮೂಗಿನ ಮೇಲೆ ಬೆರಳಿಡಬೇಕಾಗಿಲ್ಲ. ಅಳಲೆಕಾಯಿ ಪಂಡಿತರಿಗಿಂತ ನೆಲ್ಲಿಕಾಯಿ ಪಂಡಿತರೇ ಶ್ರೇಷ್ಠರು. ಪ್ಲಾನಿನ ರಚಕರಲ್ಲಿ ಅಂಥ ಒಗರಿದೆ. ಹುಳಿಯಿದೆ. ಔಷಧಿ ಅಂದಮೇಲೆ ಅದು ಹಾಗೇ ಇರಬೇಕಲ್ಲವೆ? ಪಂಚವರ್ಷ ಮುಗಿಯುವುದರಲ್ಲಿ ನೀವು ಜೀವ ಗಟ್ಟಿ ಹಿಡಿದುಕೊಂಡಿರಬೇಕು. ಬಿಟ್ಟರೆ ಅದಕ್ಕೆ ನೀವೇ ಹೊಣೆ. ಇದು ಅನ್ನ ತೆತ್ತು ಚಿನ್ನ ಪಡೆಯೋ ಸುವರ್ಣ ಸಂಧಿ ನಿಮಗೆ.

ಅಮೇರಿಕದವರೆಲ್ಲ ಹೀಗೇ ದೊಡ್ಡವರಾದದ್ದು. ರಾಷ್ಟ್ರತ್ಯಾಗಿ ಮಾಡೋ ತ್ಯಾಗಕ್ಕೆ ರಾಷ್ಟ್ರತ್ಯಾಗ ಎಂದು ಹೆಸರು. ಅದು ಮಾಡೋ ಹೊತ್ತು ಬಂದರೂ ಯಾರೂ ಹಿಂಜರಿಯಬಾರದು. ಇದ್ದವರು ಮಾಡೋ ತ್ಯಾಗಕ್ಕಿಂತ ಇಲ್ಲದವರು ಮಾಡೋ ತ್ಯಾಗ (ಅಂದರೆ ದಾನ) ಇದೆಯಲ್ಲ. ಅದಕ್ಕೇ ಬೆಲೆ ಹೆಚ್ಚು. ಅದುದರಿಂದ ದೇಹ-ಬುದ್ಧಿ ಶ್ರಮಗಳನ್ನು ತೆತ್ತು ಕೂಲಿ-ಸಂಬಳ ಪಡೆಯುವ ಮಂದಿಯಿಂದು ಬೇಕಾದಷ್ಟು ತ್ಯಾಗಮಾಡಿ ರಾಷ್ಟ್ರೋದ್ಧಾರ ಮಾಡಬಹುದು. ಭಾರತೀಯರು ಅನಾದಿಯಿಂದಲೂ ತ್ಯಾಗವೀರರು—ಅವರಲ್ಲೂ ಬಡವರದು ಮಾತ್ರ ಒಂದು ಕೈ ಮೇಲು ! ಅವರ ತ್ಯಾಗ ದಾರಿದ್ರ್ಯದಿಂದು ದೇಶದ ತುಂಬ ನಲಿದಾಡಲಿ ! ನಮಸ್ತೇ. ಜಯ ಹಿಂದ್. ಪಾಂಚ್‌ಪ್ಯಾನ್ ಜಿಂದಾಬಾದ್ !

## ಚುನಾವಣಾ ಭಾಷಣ

೧೪೫ನೆಯ ಮೀಟರ್ ಹಕ್ಕಿ ನಿದ್ದೆಹೋದ ಕಾಲ: ಮಾನವರಲ್ಲ !

ಇಷ್ಟರವರೆಗೆ ನೀವೆಲ್ಲ ಸರಸತರವಾದ ಸಣ್ಣಕತೆಯನ್ನು ಸವಿಸ್ತಾರವಾಗಿ ಸವಿದಿರಿ. ಈಗ ನೀವು ನಾಳಿನ ಚುನಾವಣೆಯ ಬಗ್ಗೆ ಉತ್ತರಪ್ರದೇಶದ ಸೋಶಲಿಸ್ಟ್ ಮುಖಂಡ ಉತ್ತರಪ್ರಕಾಶರ ಭಾಷಣವನ್ನು ಕೇಳುವಿರಿ. ಶ್ರೀಮಾನ್ ಉತ್ತರ ಪ್ರಕಾಶರು:

"ರಚನಾತ್ಮಕ ಕಾರ್ಯಕರ್ತರನ್ನು ನಾವು ತೀರ ಹೊರಗಿಡಲಾರೆವು. ಅವರು ಹೇಳುವುದು ಸೋಶಲಿಜಮ್ಮಿಗೆ ಬಹಳ ಹತ್ತಿರವಾದ ತತ್ವ. ಗಾಂಧಿಯವರ ಟ್ರಸ್ಟೀಶಿಪ್ ಸಿದ್ಧಾಂತವನ್ನು ಹಾಸ್ಯಮಾಡಲಾಗದು. ಗಾಂಧೀಜಮ್ಮು ಸೋಶಲಿಜಮ್ಮಿನ ಒಂದು ಅಂಗ. ಅದರೆ ಬೃಹದಾಕಾರದ ಸೋಶಲಿಜಮ್ಮಿನ ಹೊಟ್ಟೆಯಲ್ಲಿ ಗಾಂಧೀಜಮ್ಮು ಅಡಗಿದೆ. ಉತ್ತರ ಕಾಂಗ್ರೆಸ್ಸು ಕ್ಯಾಪಿಟಲಿಸ್ಟಿಕ್ಕು: ಗಾಂಧೀವಾದವನ್ನು ಸಂಪೂರ್ಣ ತ್ಯಜಿಸಿಬಿಟ್ಟಿದೆ. ಅದುದರಿಂದ ಭಾರತೀಯ ಪ್ರಜೆಗಳೆಲ್ಲರೂ ಸೋಶಲಿಸ್ಟರಿಗೆ ಮತಹಾಕಬೇಕು. ಬೇಕಾದರೆ ಜನರು ನಮ್ಮನ್ನು ಗಾ-ಸೋಶಲಿಸ್ಟರೆಂದು ಕರೆಯಲಿ. ಗಾಸೋಶಲಿಜಮ್ಮು ಮಾರ್ಕ್ಸ್‌ನಮೂಲ ಸಿದ್ಧಾಂತಕ್ಕೂ ಮುಂದೆ ಹೋಗಿದೆ. ಭಾರತೀಯ ಸನ್ನಿವೇಶಕ್ಕೆ ಅದು ಬಹಳ ಯುಕ್ತವಾದ ಮದ್ದೆನಿಸಿದೆ. ಯುದ್ಧ ಕೊರಿಯದಲ್ಲಾದರೂ ಗಾಯವಾಗಿರುವುದು ಭಾರತಸ್ಥ ಭಾರತೀಯರಿಗೇ. ಈ ಮಾತಿನ ಮರ್ಮವನ್ನು ಎಲ್ಲರೂ ಅರಿತುಕೊಳ್ಳಬೇಕು. ಈ ಗಾಯಕ್ಕೆ ಮದ್ದೆರೆಯಲು ನಾವುಗಳೆಲ್ಲ ಕಲ್ಲುಗಳನ್ನು ಹುಡುಕಿಕೊಂಡು ಬರಬೇಕು. ಸದ್ಯದ ವಿಪಕ್ಷ ಸರಕಾರದಲ್ಲಿ ಕಲ್ಲುಗಳ ದರ ಕೂಡ ಗಗನಕ್ಕೇರಿಹೋಗಿದೆ. ಅದನ್ನು ಇಳಿಸಲು ನಾವು ಏನೇನನ್ನು ತರಬೇಕು. ಇಂದಿನ

ಅವಸ್ಥೆಯಲ್ಲಿ ಏನೂ ಕೂಡ ಸಿಗದಾಗಿದೆ: ಅದನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳಬೇಕು. ಅದಕ್ಕೆ ವಿನಿಮಯಪದಾರ್ಥ ನಮ್ಮಲ್ಲೇನೂ ಇಲ್ಲ. ಅದಕ್ಕೆ ಸರಕಾರವೇ ಹೊಣೆ. ಒಟ್ಟಿನಲ್ಲಿ ಗಾಸೋಲಿಜಂ ಬರಬೇಕಾದರೆ ಪರದೇಶದ ಏಣಿ ಬೇಕು: ಏಣಿ ಸಿಗಬೇಕಾದರೆ ಸದ್ಯದ ಸರಕಾರ ಉರುಳಬೇಕು. ಅದನ್ನು ಉರುಳಿಸಲು ಪರದೇಶದ ವಿಜ್ಞಾನದ ದೊಡ್ಡ ಗಾಳಿ ಬೀಸಬೇಕು. ವಿಜ್ಞಾನ ಪ್ರಗತಿಗೆ ಯುದ್ಧ ಬೇಕು. ಯುದ್ಧಕ್ಕೆ ಜನ ಬೇಕು. ಸರಕಾರ ಜನ ಕಳಿಸ ಕೊಡದು. ಆದುದರಿಂದ ನಮ್ಮ ಕೈಯಲ್ಲಿ ಏನು ಮಾಡಲೂ ಸಾಧ್ಯವಿಲ್ಲ. ಇದಕ್ಕೆ ಸರಕಾರವೇ ಹೊಣೆ. ಇನ್ನು ಒಂದು ವೇಳೆ ನಮಗೆ ನೀವು ಓಟು ಕೊಟ್ಟರೂ ಅದನ್ನು ನೀವು ಹಾಕುವುದು ಸರಕಾರೀ ಬ್ಯಾಲೆಟ್ ಬಾಕ್ಸಿನಲ್ಲಿ. ಆದುದರಿಂದ ಅದು ನಮಗೆ ತಲುಪಲಾರದು. ಇದಕ್ಕಾಗಿ ನೀವು ನಿಮ್ಮ ಅಮೂಲ್ಯ ಮತಗಳನ್ನು ನಮ್ಮ ಮತಗಳಿಗೇ ಬಂದು ಅಲ್ಲೇ ಡಬ್ಬಿಗೆ ಹಾಕತಕ್ಕದ್ದು. ಡಬ್ಬಿಗಳಲ್ಲಿ 'ಗಾಸೋ ಮತ' ಎಂದು ಬರೆದಿದೆಯೋ ಇಲ್ಲವೋ ಎಂಬುದನ್ನು ಮೊದಲೇ ನೀವು ಪರಿಶೀಲಿಸಿಕೊಳ್ಳಬೇಕು. ಅದಕ್ಕೆ ತಪ್ಪಿದರೆ ನೀವೇ ಹೊಣೆ. ನಾವು ಯಾವುದಕ್ಕೂ ಯಾವಾಗಲೂ ಜವಾಬುದಾರರಲ್ಲ!

'ಗಾಸೋಹಾಸಃ ಕವಿಕುಲಗುರುಃ ಕರ್ಣಕಾರ್ಥೀ ಕಷಾಯಃ'

ಎಂಬ ಪ್ರಾಚೀನ ಕವಿ ವಾಣಿಯಾದರೂ ಇದೇ ಮಾತನ್ನು ಬೆಂಬಲಿಸುತ್ತದೆ! ಜೈ ಗಾಸೋಲೀನಿಜಂಕೀ !"

## ವ್ಯಕ್ತಿ ಚಿತ್ರ

ಗಿಳಿಸನೆಯ ಮಿಟರ್ ಅಧಿಕಾರ ಕಾಲ

ಸಭ್ಯರೇ, ಶ್ರಾವಕರೇ, ಈಗ ನಿಮಗಾಗಿ ಅತ್ಯಂತ ಹೊಸ ಮಾದರಿಯ ಕಾರ್ಯಕ್ರಮ ಕಾದಿದೆ. ಅದೆಂದರೆ ವ್ಯಕ್ತಿಚಿತ್ರ! ವ್ಯಕ್ತಿಯೂ ಸಾಮಾನ್ಯನಲ್ಲ, ಚಿತ್ರಕಾರರೂ ಸಾಧಾರಣದವರಲ್ಲ. ಉತ್ತರಪ್ರದೇಶದ ಯಾರಿಗೂ ಇವರು ಅಪರಿಚಿತರಲ್ಲ—ಆದರೆ ಸುಪರಿಚಯ ಸಾಕಷ್ಟಿಲ್ಲ ಎಂಬುದನ್ನೀಗ ಎಲ್ಲರೂ ಒಪ್ಪುವಿರೆಂದು ನಾನು ಎದೆತಟ್ಟಿ ಹೇಳಬಲ್ಲೆ. ಚಿತ್ರವು ಮಾನ್ಯ ಕೃಪ್ಲೋಲಿನಿಯವರದು: ಚಿತ್ರಕರು ಶ್ರೀ ತ್ರಿಪಾನಾಥರು:

"ಅರ್ಧನಾರಿ ಎಂದರೆ ಶಿವ ಎಂಬುದನ್ನು ಹೊಸದಾಗಿ ಹೇಳಬೇಕೆ? ಬೇಕು ಎನ್ನುವವ ನಾನು. ಹಳೆಗಾಲದ ಮಾತಾದರೂ ಅದನ್ನಾಡುತ್ತಿರುವುದು ಹೊಸ ಕಾಲದಲ್ಲಿ ಎಂಬುದನ್ನು ಗಮನದಲ್ಲಿಡಿರಿ. ಸಪತ್ನೀಕರಾಗಿ ಪಾರ್ಲಿಮೆಂಟಿನಲ್ಲಿ ಪಟ್ಟಾಧಿಕಾರ ನಡೆಸುತ್ತಿರುವ ಕೃಪ್ಲೋಲಿನಿ ಅರೆನಾರಿ ಎಂದರೆ ಯಾರಿಗಾದರೂ

[illegible]

[illegible]

[illegible]

ಸುಳ್ಳೆನ್ನುವ ಧೈರ್ಯ ಬಂದೀತೇ? ಪ್ರಗತಿಶೀಲ ಯುಗವೆಂದರೆ ಪ್ರಮೀಳಾ ಯುಗ. ಅದರ ಧರ್ಮಕ್ಕೆ ಅನುಗುಣವಾಗಿ ಪಿತೃಪಕ್ಷವನ್ನು ತ್ಯಜಿಸಿ ಹೊರಬಿದ್ದ ಕೃಪೋಲಿನಿಗೆ ಪತ್ನೀಪಕ್ಷ ದೊರಕಿತು!

"ಕೃಪೋಲಿನಿ ಎಂದರೆ ಉತ್ತರಪುರದ ಭಾರಿ ಪಟರನ್: ಪಾರ್ಲಿಮೆಂಟಿನ ಪಂಚಾನನ: ಮನೆಯಲ್ಲಿ ಕುಂಕುಮವಿಲ್ಲದ ಸುಮಂಗಲ! ಅವನ ಮನೆ ಕಟ್ಟಿ ಕೊಂಡು ನಾವೇನು ಮಾಡಬೇಕು? ವಿಚಾರ ಮಾಡಬೇಕು. ಅವನು ಕಟ್ಟುವ ಮಠದ ಲಕ್ಷಣ ಅದರಿಂದಲೇ ಸಿದ್ಧ.

"ಮನುಷ್ಯಸ್ಪರ್ಶವಾದ ಮಂಗವನ್ನು ಹಿಂಡಿನಲ್ಲಿ ಸೇರಿಸಿಕೊಳ್ಳುವುದೇ ಇಲ್ಲವಂತೆ. ಅಂಥವೇ ಹೆಚ್ಚಾದರೆ ಅವುಗಳದೇ ಒಂದು ಶಿಬಿರ ತಯಾರಾಗುವುದು ಸ್ವಾಭಾವಿಕ. ಪಿತೃಪಕ್ಷ ಬಿಟ್ಟು ಬಂದ ಜನರಲ್ಲಿ ಪೂರ್ಣವಾಗಿ ಪತ್ನೀಪರಾಯಣತೆ ಬೆಳೆದಿಲ್ಲ. ಕೃಪೋಲಿನಿಗೆ ಆತ್ಮಬುದ್ಧಿಯಿಲ್ಲವಾದರೂ ಪತ್ನೀಬುದ್ಧಿ ಸಂಪೂರ್ಣ ವಾಗಿ ಇದೆ. ಆದುದರಿಂದ ಬಿಟ್ಟು ಬಂದವರ ಜೆಸಕ ಎನಿಸಿಕೊಂಬ ಪ್ರಯತ್ನದಲ್ಲಿ ಮಹಾಶಯ ಸಾಕಷ್ಟು ಕೃತಕೃತ್ಯನಾಗಲಿಲ್ಲ. ಪಿತೃಪಕ್ಷದ ಪಿಂಡ ಬಹಳ ಕಾಲ ತಿಂದದ್ದರಿಂದ ಇವನಲ್ಲೂ ದಿನದ ಎರಡೇ ತಾಸುಗಳಲ್ಲಾದರೂ ಅತ್ತಕಡೆ ಮರುಕ ಹುಟ್ಟುವುದು ತಪ್ಪಿಲ್ಲ. ಇಂಥ ನಾರುಸ್ವಭಾವದ ನರರು ನಾರುತ್ತ ಲಾದರೂ ಬದುಕಿಯೇ ತೀರುವರು. ಬಡಪೆಟ್ಟಿಗೇ ಬಾಗುವ ಇವರಿಗೆ ದೀರ್ಘಾ ಯುಷ್ಯ ಕಟ್ಟಿಟ್ಟದ್ದು!

"ಪಕ್ಷ ಕಟ್ಟುವ ತಂತ್ರವನ್ನು ಈತ ಜರಕ್‌ಬಾಬುಗಳಿಂದ ಕಲಿತಿದ್ದಾನೆ. ಹೆಣ್ಣುಗಂಟು ಕಟ್ಟುವುದೂ ಸುಲಭ. ಬಿಚ್ಚುವುದೂ ಸುಲಭ. ಗಾಳಿ ಬಂದಾಗ ತೂರಿಕೊಳ್ಳಲೂ ಆರ. ಗಾಳಿಯಿಲ್ಲದಾಗ ಸುಮ್ಮನೆ ಕುಳಿತುಕೊಳ್ಳಲೂ ಆರ– ಇಂಥ ಅಪರಂಜಿ: ಅಂದರೆ. ಕುಚೋದ್ಯಕ್ಕಿಂತ ಚೋದ್ಯವೇ ಜಾಸ್ತಿ. ಎಲಾ ಇವನ? ಅಂತ ನೀವಾರಾದರೂ ದನಿಯತ್ತಿದರೆ ಕೋಲಮೇಲೆ ಹಾವು ಬಂದಂತೆ ಬರುತ್ತಾನೆ. ಉಬ್ಬರಕ್ಕಿಂತ ಅಬ್ಬರವೇ ಹೆಚ್ಚು! ಇಡ್ಡಲಿಯಾದರೂ ಒಂದು ಲೆಕ್ಕ; ಚಪಾತಿಯಾದರೂ ಒಂದು ಲೆಕ್ಕ. ಅದೂ ಅಲ್ಲ. ಇದೂ ಅಲ್ಲ: ಅರೆ ಬೇಯುವ ಉಪ್ಪಿಟ್ಟು!

## ರೇಶನ್ ಹೊಟ್ಟೆ

ಗಳಿಶನೆಯ ಮೀಟರ್ ಕೆಟ್ಟಿರುಳ ಕಾಲ

ಈವರೆಗೆ ತಾವೆಲ್ಲ ವ್ಯಕ್ತಿಚಿತ್ರವನ್ನು ಕಿವಿಯಿಂದ ಕಂಡಿರಿ. ತುಂಬಾ ಘಸ್ನ ವಾದಗಳು. ಈಗ ರೇಶನ್ ಹೊಟ್ಟೆ ಎಂಬ ಹೊಸ ಸೃಷ್ಟಿಯ ಬಗ್ಗೆ ವಿಜ್ಞಾನ

ಭಾಸ್ಕರ ವಿತಂಡನ್ನರ ಸುಮನೋಜ್ಞವಾದ ಭಾಷಣವನ್ನು ಲಾಲಿಸುವಿರಿ.

ಶ್ರೀ ವಿತಂಡನ್ನರು:

"ಗರುಡಪುರಾಣದಲ್ಲಿ ಕಲಿಯುಗಾಂತ್ಯದಲ್ಲಿ ಹೆಪ್ಪೆರಳುಗಾತ್ರದ ಮಾನವರು ತುಂಬೆಯ ಗಿಡಕ್ಕೆ ಏಣಿ ಹಾಕಿಕೊಂಡು ಹೂ ಕೊಯ್ಯುತ್ತಾರೆ ಎಂದು ಹೇಳಿರುವುದರಲ್ಲಿ ವೈಜ್ಞಾನಿಕ ಸತ್ಯವಿದೆ. ಹ್ರಸ್ವತೆ ಅಥವಾ ಸೂಕ್ಷ್ಮತೆ ಸಕಲ ಜೀವಿಗಳ ವಿಕಾಸದ ಅಂತ್ಯಾವಸ್ಥೆ. ಸೂಕ್ಷ್ಮ ಸೂಕ್ಷ್ಮತರವಾಗುತ್ತ ಹೋಗುವುದೇ ಪ್ರಗತಿ. ನಮ್ಮ ಶರೀರ, ಮನಸ್ಸುಗಳು ಆಗಲೇ ಹಿಂದಿಗಿಂತ ಸಣ್ಣವಾಗಿವೆ ಎಂಬುವನ್ನು ಈ ರೇಶನ್ ಯುಗ ಪ್ರತ್ಯಕ್ಷವಾಗಿ ಸಿದ್ಧಮಾಡಿ ತೋರಿಸಿದೆ. 'ಅಣೋರಣೀಯಾನ್' ಎಂದು ಪುರಾಣಗಳು ಬಣ್ಣಿಸುವ ದೈವೀ ಸ್ಥಿತಿಯೇ ನಮ್ಮ ಪರಮಾದರ್ಶ ಎಂಬುದನ್ನು ಆಧುನಿಕ ವಿಜ್ಞಾನ ಮತ್ತು ಅದನ್ನವಲಂಬಿಸಿದ ರಾಜಕೀಯ ಧೋರಣ ಇವು ಒಪ್ಪಿವೆ.

"ಕ್ರಾಂತಿ ಎಂದರೆ ಇದೇ. ಹಿಂದೆಯಾವುದು ಮಹತ್ತೆನಿಸಿತ್ತೋ ಅದಿಂದು ಲಘು ಎನಿಸಿದೆ. ಹಿಂದೆ ಲಘು ಎನಿಸಿದ್ದು ಇಂದು ಮಹತ್ತಾಗುತ್ತಹೋಗಿದೆ. ಜಠರ ಪ್ರಶ್ನೆ ಹಿಂದೆ ಲಘು. ಇಂದು ಮಹತ್. ಹಿಂದೆ ದೊಡ್ಡದಾಗಿದ್ದ ಅದು ಇಂದು ಸಣ್ಣದಾಗಿದೆ. ಬಕತ್ವದಿಂದ ನಾವಿಂದು ಭೇಕತ್ವಕ್ಕೆ ಬಂದು ಮುಟ್ಟಿದ್ದೇವೆ. ಮುಂದಿನದು ಕೀಟತ್ವ: ಕೀಟಗ್ರಾಹ್ಯ ಆಹಾರ ಪ್ರಮಾಣದಿಂದ ನಮ್ಮ ಹಸಿವು ಇಂಗುವುದು ಮುಂದಿನ ಮಟ್ಟ. ಆ ಸಿದ್ಧಿಯೇ ಇಂದಿನ ಶಿಕ್ಷಣದ ಗುರಿ. ರಾಜಕೀಯ ಉತ್ಕರ್ಷದ ಸಿರಿ.

"ಮಾನ್ಯ ಚಿತ್ರರಾಯಣರೇ. ನೂರುವರ್ಷಗಳಲ್ಲಿ ಹಿಂದೆ ಮಾಡಲಾಗುತ್ತಿದ್ದ ಕಾರ್ಯಗಳನ್ನು ಮೂರು ವರ್ಷಗಳಲ್ಲಿಂದು ಮಾಡಿ ಮುಗಿಸಬಲ್ಲೆವಾದರೆ ನಮಗಿರುವ ಆಯುಷ್ಯ ಮತ್ತು ಕಾರ್ಯಶಕ್ತಿಯ ಪೂರಕಕೇಂದ್ರವಾದ ಹೊಟ್ಟೆ ಇವುಗಳು ಅನವಶ್ಯಕ ಪ್ರಮಾಣದಲ್ಲಿವೆ ಎಂಬುದು ಸ್ಪಷ್ಟ. ಅವೀಗ ಕ್ರಮೇಣ ಅಪಕರ್ಷಗತಿ ಹಿಡಿದಿರುವುದು ಸ್ವಾಭಾವಿಕ. ವಿಜ್ಞಾನ ಸಾಧನಗಳಿರುವುದರಿಂದ ದೇಹಶಕ್ತಿ ಮೊದಲಿನಷ್ಟು ಇರಬೇಕಾಗಿಲ್ಲ: ಇದ್ದರೆ ಅದೀಗ ವ್ಯರ್ಥ. ಆದುದರಿಂದ ನಿಸರ್ಗ ಮತ್ತು ತದನುಸಾರಿಯಾದ ಸರಕಾರ ಇವು ರೇಶನ್ ತತ್ವವನ್ನು ಹಿಡಿದು ಜಠರಸಂಕೋಚನ ವಿಧಾನವನ್ನು ಆರಂಭಿಸಿರುವುದು ಕ್ರಮಪ್ರಾಪ್ತ. ಇಂದು ಚಿಕ್ಕ ಹೊಟ್ಟೆಯುಳ್ಳವರೇ ಚೆಲುವರು. ಅಲ್ಪಭಕ್ಷಕರು. ಅಲ್ಪಕಾರ್ಯಪರರು. ಅಲ್ಪಾಯುಗಳು. ಅಲ್ಪಭಾವನಾಬಲ-ಬುದ್ಧಿಬಲ ಉಳ್ಳ ಅಲ್ಪರು. ಅಬಲರು ಇವರೇ ಸುಂದರರು. ಸುಸಂಸ್ಕೃತರು. ಸದ್‌ಗೃಹಸ್ಥರು. ಶಿಷ್ಟರು ಎಂದು ತಿಳಿಯತಕ್ಕದ್ದು. ಅಬಲ-ಅಬಲೆಯರೇ ಇಂದು ಪ್ರಬಲರೆಂಬುವನ್ನು

ಜೀವಶಾಸ್ತ್ರ ಸಿದ್ಧಮಾಡಿಕೊಟ್ಟಿದೆ. ಆದಕ್ಕೇ ಇದು ಗಂಡು ಯುಗವಲ್ಲ ಹೆಣ್ಣು ಯುಗ ಎನ್ನುತ್ತಾರೆ ವಿದ್ಯಾವಂತರು. ವಿಶ್ವಾಮಿತ್ರ ಪರಾಶರಾದಿ ಮುನಿಗಳು ಗಾಳಿ, ನೀರು, ತರಗೆಲೆ ಭಕ್ಷಿಸಿ ಆದರ್ಶ ಪುರುಷರೆನಿಸಿದ್ದು ಸುಪ್ರಸಿದ್ಧ. ಹೀಗಿರುವಾಗ ನಾವಾದರೂ ವಿಜ್ಞಾನಸಮರ್ಥಿತ ರಾಜಕೀಯ ಧೋರಣದಂತೆ ಅಲ್ಪ ಭಕ್ಷಣಾಭ್ಯಾಸಿಗಳಾಗಿ ಕಿರುಹೊಟ್ಟೆಯ ಕಿಂನರರಾಗುವುದು(ಕಿಂಪುರುಷರಾಗುವುದು) ಪ್ರಗತಿ, ವಿಕಾಸ, ಉನ್ನತಿ ಎನ್ನಬೇಕಲ್ಲವೆ?

## ವಾಚನ

೧೪೭ನೆಯ ಮೀಟರ್ ಶುಕ್ರೋದಯ ಕಾಲ

ಬೆಳ್ಳಿ ಮೂಡಿದೆ. ಭಾರತ ಪ್ರಾರಂಭವಾಗುತ್ತದೆ. ವಾಚಕರು ಅಂಜಿಗರ ಅಕ್ಷರಚಕ್ಷುಗಳು. ತಪ್ಪು ಓದುವುದು ಅವರಿಗೆ ಗೊತ್ತೇ ಇಲ್ಲ ಎಂಬುದು ಅವರ ಕೀರ್ತಿ. ಮಾನ್ಯ ಅಕ್ಷರಚಕ್ಷುಗಳು:

ಶ್ರೀರಮಣಿಯೆಡಗಾಲ ಬೆರಳಿನ
ಕೋರಯಿಪ ಸುಲಿಯುಗುರುಗಳ ಹಿಡಿ
ದಾರಯಿದು ನಟಿಕೆಯನು ಮುನಿವರ ಗೋಷ್ಠಿಯಲಿ ತೆಗೆದು ।
ಶೂರತನವನು ಮೆರೆದ ಕಲ್ಮಠ
ನಾರಿವತ್ಸಲದೇವ ನಿಮ್ಮ ಕ
ರಾರವಿಂದವ ಹಿಡಿದು ನಡೆಸಲಿ ಮನೆಯ ಹಿತ್ತಿಲಲಿ ॥ ೧ ॥

ಉತ್ತರಾಪುರದಲ್ಲಿ ಹಸಿವಿನ
ಕುತ್ತವಡಸಿದ ಪರಿಯನಾಗಳೆ
ಬಿತ್ತರಿಸಲಿಲ್ಲವೆ? ಅದೀಗ ಮಹತ್ವಕೇರಿತಲಾ ।
ಮತ್ತೆಮತ್ತಟ್ಟಿದರು ಸಚಿವರು
ಸುತ್ತಲಿನ ನಾಡುಗಳಿಗೋಲೆಯ
ಸತ್ತುದನು ಸುಳ್ಳೆಂದು ಸಾರುತ ಶಂಖನಾದದಲಿ ॥ ೨ ॥

ಬಿಳಿಯ, ಹಳದಿಯ, ಬಣ್ಣಬಣ್ಣದ
ಗೆಳೆಯ ನಾಡಿಗರವರ ಮನವಿಯ
ನಳೆದು ಸುರಿದಾಡಿಸಲು ತೊಡಗಲು ಸಾಕುಸಾಕಾಯ್ತು ।
ಬಳಲುತಿರೆ ಸಚಿವರ್ಕಳೊಮ್ಮೆಲೆ
ಕಳಿಸಲೊಪ್ಪಿದರಿತರರಾದರೆ
ತಿಳಿನಗೆಯ ಬೆಳ್ಳೊಗಲಿಗರು ಮುಂದೊಡತೊಡಗಿದರು ॥ ೩ ॥

ಹೃದಯಮಿತ್ರರು ಕಳಿಸಲು ನೃಪ
ಗದಿಸಿದುದು ಗರ್ವಕ್ಕೆ ಭಂಗವ
ನೊದವಿಸಿತು ಮತ್ತಾದರಾ ಬಣ್ಣಗರು ಕಳಿಸುವುದ ।
ಮುದವೆ ಕೊಳ್ಳಲು ಕೈಯಿ ಬಾರದು
ಸದಮಲತೆಗದು ಸೇರದೆಂದಾ
ವಿಧುರ ಮಂತ್ರಿಮಹಾತ್ಮ ಚಿಂತೆಗೆ ತಲೆಯ ತೆತ್ತನಲಾ ॥ ೪ ॥

ಮುಟ್ಟದವರಿಗೆ ಮುಟ್ಟಗೊಟ್ಟ ಮ
ಹಾಟ್ಟಹಾಸದ ದೊರೆಗಳಿಗೆ ಕೈ
ಸುಟ್ಟ ಹಾಗೆನಿಸಿತು ಕಮ್ಯೂನಿಸ್ಟ ಕಾಡುಗಳ ಕಾಳ ।
ಮುಟ್ಟುವೊಡೆ. ಹಾಯ್ ಹರಹರಾ ! ಕೈ
ಬಿಟ್ಟರೂ ಮೊದಲಲ್ಲಿ ಕೊನೆಗಾ
ರೊಟ್ಟಿಗೇ ನೀಡಿದನು ಭೂಪತಿ ತನ್ನ ಮುಡಿಗೈಯ ॥ ೫ ॥

ಹೇಳಲೇನಾ ಶೋಕಸಾಗರ
ದಾಳವಳೆಯಲು ಮೇರು ಕೂಡಾ
ಸಾಲದೋ ಬಹುಮಾನವನು ಸಂದೂಕದಲ್ಲಿಟ್ಟು ।
ಕಾಳಜಿಯ ತಾಳಿದ್ದು ಬರಲಿಹ
ಖೂಳತನದ ಚುನಾವಣೆಯ ಹೆ
ದ್ದಾಳಿಗಂಜಿ ಜನಾನುರಂಜನ ಲಗ್ನ ಮಂತ್ರಿಕುಲ ! ॥ ೬ ॥

ರಾಯತನದಲಿ ಜೀಯ ಎನ್ನದೆ
ಪಾಯಸವ ಭುಂಜಿಸುತ ಬಾಳಿದ
ನಾಯಕರ ಮುಖ ಕರಟವಗಲಿಕ್ಕಿಳಿದ ಆ ದಿನದ ।
ಶಾಯಿಕಳೆಯ ಶಿವೇತರಪ್ರದ
ವ್ಯಾಯಮಾಟಗಳಿರವ ಸಾಸಿರ
ತಾಯ ಮಗನೂ ತಿಳಿಸಲಾರನು ಬಾಯ ಮಾತಿಂದ ॥ ೭ ॥

## ಡೆಮಾಕ್ರಸಿ ಸತ್ವಪರೀಕ್ಷೆ!

೧೪ಳನೆಯ ಛಂದ ಕುಜರಾಹು ಸಂಧಿಕಾಲ

ಆಕಾಶವಾಣಿಯಲ್ಲೀಗ ಅಕ್ಕರಗೊಟ್ಟಿ: ಅಂದರೆ ಮೀಟಿಂಗು. ನಾಗರಿಕತೆಯ ತಿರುಳು ಎನಿಸಿದ ಪೊಲಿಟಿಕಲ್ ಅಫೇರ್ಸ್ ಮಂತ್ರಿಗಳ ಸೋಲಿನ ಬಗ್ಗೆ ಟೀಕಾಟೂಕೆ. ಟಾಪೀಲರ ಘನಘೋರ ಗರ್ಜನೆ. ಡೆಮಾಕ್ರಸಿಯ ಸತ್ವಪರೀಕ್ಷೆ!

(Tap-heel)

ಪಾಟೀಲ್—

ಅಲ್ಲಾ, ಈ ಜನಗಳಿಗೇನು ಬುದ್ಧಿಯಿಲ್ಲ ಅಂತೀನಿ. ಒಂದೆ ಗೃಹಮಂತ್ರಿಯಾಗಿ ಮುಖ್ಯಮಂತ್ರಿಗೇ ಗ್ರಹಣ ಹಿಡಿಸಿದ ಭುಜಬಲಪರಾಕ್ರಮಿಯಾದ ಮಹಾರಾಜಜಿಯವರನ್ನು ಚುನಾವಣೆಯಲ್ಲಿ ಆರಿಸದೆ ಬಿಟ್ಟು ಇವರ ದಿಮಾಕನ್ನು ಕಂಡರೆ ಮೈಯಲ್ಲಿಯ ಎಂಟುಕೋಟಿ ರೋಮಗಳೂ ಉರಿದೇಳುತ್ತವೆ. ಅಬ್ಬಾ ಏನಿವರ ಸೊಕ್ಕು! ಹೇಳುವವರು ಕೇಳುವವರು ಯಾರೂ ಇಲ್ಲದಾಗಿಹೋಯಿತೆ? ಎ ಲ ಲ ಲ ಲಾ! ಈ ಡೆಮಾಕ್ರಾಟರ ಹಿಮಾಳಿನ ಮಸ್ತಿಯಾದರೂ ಎಷ್ಟಿದೆಯೆಂಬುದನ್ನು ಪರೀಕ್ಷೆಮಾಡಿಬಿಡುತ್ತೇನೆ. ಹಸ್ತಿನಾಪುರದ ವರೆಗೆ ಸ್ವತಃ ಬಿಜಯಗೆಯ್ದು ಕಾನ್‌ಸ್ಟಿಟ್ಯೂಶನ್ನನ್ನೇ ಬದಲಿಸಿಬಿಡುತ್ತೇನೆ. ಮಹಾರಾಜಜಿಯನ್ನು ಮುಖ್ಯಮಂತ್ರಿಯನ್ನಾಗಿ ಪಟ್ಟಗಟ್ಟದಿದ್ದರೆ ನಾನು ಪಾಟೀಲನೇ ಅಲ್ಲ. ಮೀಸೆ ತೆಗೆದದ್ದೇ ಪ್ರಶ್ನ.

ಪಿಕಾಸಪ್ಪ—

ಅಲ್ಲರೀ ಪಾಟೀಲ ಸಾಹೇಬರೆ. ನೀವು ಇರುವುದು ಯಾವ ಯುಗದಲ್ಲಿ ಎಂಬುದನ್ನೇ ಮರೆತುಬಿಟ್ಟಂತೆ ಕಾಣುತ್ತದೆ. ನಿಮ್ಮ ಮಹಾಲೀ ಸೈನಿಕ ಬಲದ ಮಸ್ತಿ ಇಲ್ಲಿ ಕೆಲಸಕ್ಕೆ ಬರದು. ಇದು ಡೆಮಾಕ್ರಸಿಯ ಕಾಲ. ಹಸ್ತಿನಾಪತಿಯಲ್ಲಿಯ ಉತ್ತರಭೂಪನನ್ನು ಬೆದರಿಸಿ ಬುಟ್ಟಿಗೆ ಹಾಕಿಕೊಳ್ಳುವುದು ಬೂಂದಿಯುಂಡೆಯನ್ನು ಬಾಯಲ್ಲಿ ಹಾಕಿಕೊಂಡಷ್ಟು ಸುಲಭವೆಂದು ತಿಳಿದಿರೋ? ಉತ್ತರಭೂಪನನ್ನು ಅಷ್ಟು ದೊಡ್ಡ ಲಂಚಪಂಚಾನನನೆಂದು ಗಣಿಸಿಬಿಟ್ಟಿರೋ? ನವನೀತಬುಭುಕ್ಷುವೆಂದು ಲೆಕ್ಕಿಸಿದಿರೋ? ಝಣತ್ಕೃತೀಕರಾವಲಂಬನನೆಂದು ಪರಿಭಾವಿಸಿದಿರೋ? ಪುರುಷರೂಪಿ ಸ್ತ್ರೀ ಎಂದು ಪರಿಲಕ್ಷಿಸಿದಿರೋ? ನೀವೇ ಮೋಕ್ಷನಿಸ್ಸೀಮನೆಂದುನಿಶ್ಚಯಿಸಿದಿರೋ? ಹಾಗಾದರೆ ನಿಮ್ಮ ಲೆಕ್ಕಾಚಾರ ತಪ್ಪು, ಪೂರಾ ತಲೆಕೆಳಗು. ಉತ್ತರಭೂಪನು ಡೆಮಾಕ್ರಸಿ ಜಟ್ಟಿಗನ ಪಾತ್ರ: ನೆಕ್ರೂಲಾರಮ್ಮನ ಕೊರಡು: ಜಾತ್ಯತೀತ ಹುಲಿರಾಯನ ಗಣ: ಜಮೀನುದಾರ ಭಕ್ಷಕ ಹಾಯುಗುಳಿ. ಹೀಗಿರುವಾಗ ಮಹಾರಾಜಜಿಗಾಗಿ ಕಾನ್‌ಸ್ಟಿಟ್ಯೂಶನ್ನು ಬದಲಿಸಲು ಆ ಅಕಾಲತಾಂಡವನು ಒಪ್ಪಿಯಾನೇ?

ನಯುಸವಿಯಪ್ಪ—

ಯಾಕೆ ಒಪ್ಪಲಾರನರೀ? ಯಾಕೆ? ಅಂದೆ. ಒಬ್ಬ ಮಹಾರನಲ್ಲ. ಆರು ಮಹಾರರಿಗೆ ಸಮನಾದ ನಮ್ಮ ಮಹಾರಾಜಜಿಯಂಥ ಮುತ್ಸದ್ದಿ ಹುದ್ದೆಯಿಲ್ಲದ ಆ ರಾಯನಾದರೂ ಏನು ರಾಜ್ಯಭಾರ ನಡೆಸಿಯಾನು? ಇಂದ್ರನಾದರೂ ಒಬ್ಬನೇ ಸ್ವರ್ಗವನ್ನು ಆಳಬಲ್ಲನೇನು? ಮಹಾರನಿಲ್ಲದೆ ಹೋಗಿದ್ದರೆ ಎಷ್ಟೋ ಭೂಲೋಕದ

ಋಷಿಗಳು ಅವನನ್ನು ತಪೋಬಲದಿಂದ. ಗದ್ದುಗೆಯಿಂದ ಹೊರದಬ್ಬಿ ಇಂದ್ರ ರಾಗಿಡುತ್ತಿದ್ದರು ! ಆ ಅನಂಗನು ಇಂದ್ರನಿಗೆ ಹೇಗೆ ಅಂಗರಕ್ಷಕನೋ ಹಾಗೆಯೇ ಮಹಾರಾಜಿಯಾದರೂ ಉತ್ತರಭೂಪನ ರಾಜ್ಯದ ಪ್ರಾಣರಕ್ಷಾಕವಚ. ದ್ವೈಪತ್ನಿಕ ಶಿಕ್ಷಾನಿವಾರಕ ಯಂತ್ರ. ಟೆನ್ನಿಸ್‌ದೈವತ. ಅಸ್ಪೃಶ್ಯಪಾವನ. ಐರನ್ ಮ್ಯಾನ್. ಅಬಸಲ್ಯೂಟ್ ಆಟೋಕ್ರ್ಯಾಟ್ ! ಒಂದೇ. ಎರಡೇ. ಮೂರೇ, ನಾಲ್ಕೇ ?—

ಒಂದೇ ಪಾರಗುಣಾಕರಂ ಧುರಧರಂ
ಎರ್ಡೇ ಅಪಾನಪ್ರಿಯಂ ।
ಮೂರೇ ಗುರ್ಜರಭೂಷಣಂ ಗುರುಪರಂ
ನಾಲ್ಕೇ ಟೆನ್ನಿಸ್ಪತಿ ॥
ಐದೇ ಅಂತ್ಯಜ ಪಾವನಂ ಸತಿಹಿತಂ
ಆರೇ ಹತಾಂಗಾರಕಂ
ಏಳೇ ಸೋತರು ಗೆದ್ದವಂ ಜನಕಿದೇ
ನೆಂಟೇನು ಸೋಲೆಂಬವಂ ॥

ಪಾಟೀಲ್—

ಸರಿಯಪ್ಪನೆಂದುದೇ ಸರಿ. ಸರಿ: ಅದಕ್ಕೆ ನನ್ನ ಸಂಪೂರ್ಣ ಸರಿ. ಯಾರಾದ ರೇನು. ಮಹಾರಾಜಗೆ ಸರಿಯೇ? ಮಹಾರಾಜಿಯನ್ನು ಪಟ್ಟದಲ್ಲಿ ಕುಳ್ಳಿರಿಸಲು ಹೊರಟ ನನ್ನೆದುರು—

'ದೇವ ದಾನವ ಗಂಧರ್ವಯಕ್ಷ ರಾಕ್ಷಸ ಕಿನ್ನರಾಃ । ಸೋಶಾಲಿಸ್ಟಾಃ ಕಮ್ಯೂನಿಸ್ಟಾಃ ಸ್ವತಂತ್ರಾಃ ಸ್ವೈರಿಣೀಪರಾಃ'—ಈ ಯಾವ ಪಾಪಾಚಾರ ಪಂಗಡಿಗರು ಬಂದರೂ ಅವರನ್ನು ಸಜೀವ ಸ್ವರ್ಗಾರೋಹಣ ಮಾಡಿಸುವಿದಲು ತಕ್ಕ ಏರ್ಪಾಡಿದೆ ಈ ಪಾಟೀಲನಲ್ಲಿ. ತಾವ್ಯಾರು ನಾನು ಮೇಜು ಬಡಿದ ಮಾತ್ರ ದಲ್ಲಿ ನಾನು ಹೇಳಿದ ಕೆಲಸವನ್ನು ನಾ ಮಾಡುವೆ ತಾ ಮಾಡುವೆ ಎಂದು ಹಿಂಬಾಯಿಗಳೆಲ್ಲ ಮುಂಬಾಯಿಗಳಾಗಿರುತ್ತಾರೆಂಬುದನ್ನು ಬಲ್ಲಿರೇನು ಶಿಕಾಸಪ್ಪ ನವರೇ ? ಇದು ಶಿಕಾಸಿ ಪಕಾಸಿಗಳ ಕಾಲವಲ್ಲ.

This is not an age of musketeers, nor is it of biscuiteers. This is not an age of Pannah but of Jinnah! This is not your Dharwar, Karwar or domestic war; this is Bomb war. Back-bite war; Wire-pulling war and Briberological War! ಇವರ ಮುಂದೆ ನಿಮ್ಮ ಡೆಮಾಕ್ರಟರ. ಡಿಮ್ರಾಕ್ರ್ಯಾಟರ. ಅಥವಾ ಕಿಕ್ಸೀಕ್ರ್ಯಾತರ ಆಟ ನಡೆಯದು.

This is pure lambent fire that Hell itself sets! This is Gãmological operation. ಗಘ್ಘಾಲಾಜಿಕಲ್ ಅಲ್ಲ. ಗೊತ್ತಾಯಿತೋ? ಹೆಚ್ಚಿಗೆ ಮಾತಾಡಿದರೆ – ಅರೇ ಹುಹಾಲಿ ಭಯ್ಯಾ! ಅಪ್ಪೋ ಸೀದಾ! ಪಕಡೋ ಇನ್ಕೋ. ಗಿರಫ್ತಾರ್ ಕರೋ–ಏಕ್. ದೋ. ತೀನ್! ಟಾಪ್!!

## ವಚನಗಳು

೧೪೫ನೆಯ ಮೀಟರ್ ಅಜಗಲಕ್ಷ್ಮಣ ಸಂಧಿಕಾಲ

"ಸ್ವತಂತ್ರ ಉತ್ತರಪ್ರದದ ಅಮೃತವಾಣಿಗಳು!" ಪ್ರರೋಚಿತ ಕರಾಳ ವೆಂಕಟಾಚಾರ್ಯರಿಂದ. ಮಾನ್ಯ ಕರಾಳ ವೆಂಕಟಾಚಾರ್ಯರು:

೧. ಕಾಳಸಂತೆಯೇ ಬಾಳ ಸಂತೆ. ಕಾಳಧರ್ಮವೇ ಕಾಲಧರ್ಮ. ಕಾಳ ಕಲೆ ಬಾಳ ಸೆಲೆ. ಕಾಳ ಚೋರರೊಡನೆ ನೇಳಿಗಳೆದು ಬೇಳೆಬೇಯಿಸಿಕೊಳ್ಳೋ ಕೂಳ ಕೂಡಲಸಂಗಮದೇವಾ!

೨. ಗಾಂಧಿಯೇ ಮಾತಿನ ನಾಂದಿ: ಗಾಂಧಿಯೇ ಪ್ರಚಾರದ ಬ್ರಾಂದಿ. ಗಾಂಧಿಯ ಮಾತು ಗಾಳಿಯ ಪಾಲು. ಸೇಂದಿಯ ಪೀಪಾಯಿ ಕಳ್ಳಭಟ್ಟಿ ಪಾಲು. ಗಾಂಧಿ ಗಾಂಧಿ ಎಂದು ಗೋಗರೆದು ಬಾಂದಿಯೂಟ ಕಳಕೊಳ್ಳಬೇಡವೋ ಸೇಂದಿ ಸಿದ್ಧೇಶ್ವರಾ!

೩. ಸರಕಾರಿ ಮತವೇ ಸಾರ್ವಜನಿಕ ಮತ. ಮುಖ್ಯಮಂತ್ರಿಯ ಮತವೇ ಮುನ್ನಡೆಯುವ ಮತ. ಮತದಾನವೇ ಮತಿದಾನ. ಮತಚೌರ್ಯವೇ ಮಹಾ ಶೌರ್ಯ. ಮತಿವಂತರ ಮತಕ್ಕಾಗಿ ಬಿಡ್ಡಾಡದ, ಮತವಂತರ ಮತಿಗೆ ಮಂಕು ಕವಿಸಿ ಮಾನ್ಯನಾಗೋ ಪಾರ್ಲಿಮೆಂಟಿನ ಪರಮೇಶ್ವರಾ!

೪. ಲಂಚವೆಂದರೆ ಲಂಚವಲ್ಲ. ಕಂಡರೆ ಮಾತ್ರ ಅದು ಕಾಯಿದೆಯಂತೆ ಲಂಚ: ಕಾಣದಿದ್ದಲ್ಲಿ ಕಮಲಾ ಕಟಾಕ್ಷ ಪ್ರಪಂಚ. ಲಂಚ ನಿಂದಕನಿಗೆ ಸಂಚಿತವೇ ಶೂನ್ಯ. ಲಂಚ ವಂದಕನಿಗೆ ಸ್ವರ್ಗ ಕೂಡ ಗಮ್ಯ. ಲಂಚ ಪಂಚಮೆಂದು ಬೀಗಳುವವ ಹಳೆಯ ಹಂಚಿನೋಡಿಗೂ ಕೀಳಾದಾನೋ ಪಂಚನ ಸಂಗಮದೇವಾ!

೫. ಸುಳ್ಳನ್ನಾಡುವರೂ ಸುಳ್ಳೆಂದು ಸಾರದಿರು: ಕಳ್ಳತನ ಮಾಡಿದರೂ ಕಾಯಿದೆಯನ್ನು ಮೀರದಿರು. ಕಾಯಿದೆಯೇ ಕೈಲಾಸ. ಕಾಗದ ಪತ್ರವೇ ಕಾಯುವ ಮಿತ್ರ. ಕಾಯಿದೆ ಕಾಯಿದೆ ಎಂದವರೆ ಘಾಯದ ವಲ್ಲಿಂದ ಬಿತ್ತೋ ವಾಯಿದೆಯ ವಕೀಲ ಮಲ್ಲಿಕಾರ್ಜುನಾ.

೬. ಮುಕ್ತಾತ್ಮರಾರು ಎಂಬುದನ್ನು ಬಲ್ಲಿರಾ ಭವಿಗಳೇ? ತಪ್ಪನ್ನ ಪಡೆದ ಶೀಲ. ವರ್ಗವಾದ ನೌಕರ. ಮತ ಗಿಟ್ಟಿಸಿದ ಎಮ್ಮೆಲ್ಲೆ. ಮಂತ್ರಿಯಾದ

ಮಾನವೀನ. ಕಕ್ಕಮಾಲನ್ನು ಇಲ್ಲವಾಡಿದವ. ಕಂಡದ್ದನ್ನೇ ಕಾಣಸೆಂಬುದು ಕೂಗ ಬಲ್ಲವ. ಇಂತಪ್ಪ ಶರಣರ ಸಂತಪಂಥ ಹಿಡಿದು ಚಿಂತೆಬಿಟ್ಟು ಚಿರಭೋಗಿಗಳಾಗಿರೋ ಎಂಬ ನಮ್ಮ ನನ್ನಿಯ ಚೆನ್ನಿಗ ಬಮ್ಮಲ್ಲಯ್ಯ!

೭. ಜಾತಿ ಜಾತಿ ಎಂದು ಏತಕ್ಕೆ ಕೂಗುವಿರೋ? ಜಾತಿಯು ಮಾತೇ ನಿಂದ್ಯ. ಜಾತೀಯ ಕಾರ್ಯ ವಂದ್ಯ. ಜಾತಿ ಕೆಟ್ಟವನಿಗಿಂತ ಜಾತಿ ಬಿಟ್ಟೆನೆಂಬವನೇ ಜಾತಿ ಲಕ್ಷ್ಮಿಯ ಪ್ರೀತಿ ಪುತ್ರ; ಜಾತಿಯು ನೀತಿಯೂ ಸಲ್ಲ. ಜಾತೀಯ ಮಾತೂ ಸಲ್ಲ. ಖ್ಯಾತಿಯೇ ನೀತಿಯೆನಿಸ ಮನೆಯ ಜ್ಯೋತಿ—ಕಾಣಿರೋ ಎಂಬ ನಮ್ಮ ಕಾಳ ಹಾಳಿಯುವ ಕೈತವ ಕೈವಲ್ಯ ಮಹಾದೇವ!

೮. ಇಸಮ್ಮಿಗೊಂದು ಇಜಮ್ಮಿರಬೇಕು. ಇಷ್ಟ ಬಿಟ್ಟರೂ ಇಜಂ ಬಿಡಬಾರದು: ಇರುವೆ ಎಂಭತ್ತುಕೋಟಿಗೆ ಜಾತಿಯಿದ್ದರೂ ಇಜಂಗಳಿಲ್ಲ. ಪರಮಾತ್ಮನು ಸರ್ವಾಂತರ್ಯಾಮಿಯಾದರೆ ಪರ್ಇಜಂ ಸರ್ವಇಜಂ ಅಂತರ್ಯಾಮಿ: ಸರ್ವಕಾರ್ಯಗಳಲ್ಲೂ "ಸರ್ವಇಜಂ ಅಂತರ್ಗತ ಪರ್ಇಜಂ ಪ್ರಿಯತಾಂ" ಎಂಬುದೇ ನವಯುಗದ ತತ್ತ್ವಮಸಿ ಎಂದು ನಂಬಿರೋ ಎಂಬ ನಮ್ಮ ಬಂಡವಾಳ ಭಾಳಲೋಚನನ ಭಕ್ತ ಬಂಡಿಗೂಳಯ್ಯ!

## ಸೇವಕ ನಿಯಂತ್ರಣ ಶಾಸ್ತ್ರ

೧೪೬ನೆಯ ಮೀಟರ್ ಜಿಹ್ವಾಲೋಪ ಸಂಧಿಕಾಲ

'ಸೇವಕ ನಿಯಂತ್ರಣ ಶಾಸ್ತ್ರ' ಎಂಬುದು ಉತ್ತರಧ್ರುವ ವಿಜ್ಞಾನದ ಹೊಸ ಸಂಶೋಧನೆ. ಅದರಲ್ಲಿ ತಜ್ಞ ದ್ರಷ್ಟಾರರಾದ ಎಚ್ಚೆಂ ಮಹಾಶಯರೀಗ ಹೊಸ ತಂತ್ರದ ಬಗ್ಗೆ ನಿಮಗೆಲ್ಲ ಬೆಳಕು ಹಿಡಿಯುವವರಿದ್ದಾರೆ. ಮಾನ್ಯ ಎಚ್ಚೆಂ ಮಹಾಶಯರು:

'ನೀವು ಆಫೀಸಿನಲ್ಲಿ ಕುಳಿತು 'ಬೋಯ್ಯೋರಾ' ಎಂದು ಸಂಗೀತವಾಗಿ ಕರೆದಿರಿ ಎಂದಿಟ್ಟುಕೊಳ್ಳಿ. ನಿಮಗೆ ಬಹಳ ಅರ್ಜೆಂಟ್ ಕೆಲಸವಾಗಬೇಕಿತ್ತೆನ್ನಿ. ಒಂದು-ಎರಡು ಮೂರು ಬಾರಿ ಕರೆದರೂ ಬೋರ ಆವತರಿಸಲಿಲ್ಲ ಎಂದುಕೊಳ್ಳಿ. ಆಗ ನೀವೇನು ಮಾಡುವಿರಿ? ಅದೂ ಯಾರಾದರೂ ದೊಡ್ಡ ಆಫೀಸರರು ನಿಮ್ಮೆದುರು ಕುಳಿತಿದ್ದಾಗ!

'ಅದಕ್ಕೆ ಒಂದೇ ಒಂದು ಉಪಾಯವಿದೆ. ಚೆನ್ನದಂಥ ಉಪಾಯ. ಚಾಣಾಕ್ಯನಂಥ ಉಪಾಯ. ಏನೆಂದು ಹೇಳಿ ನೋಡೋಣ. ಊಹೂ. ನೀವು ಹೇಳಲಾರಿರಿ, ನನಗೆ ಗೊತ್ತು. ಅದಕ್ಕೇ ಹೇಳುತ್ತೇನೆ ಕೇಳಿ:

'Point Four' ಚತುರಂಗ ಸಹಾಯ ಯೋಜನೆಗೆ ನಿಮ್ಮ ದೇಶ ಹೇಗೂ

ಮೆಂಬರ್ ಆಗಿದೆ. ಟ್ರೂಮನ್ನರಿಗೆ ಬರೆಯಿರಿ. ನೇರವಾಗಿ ಪ್ರೆಸಿಡೆಂಟ್ ಟ್ರೂಮನ್ ಅಟ್ಲಾಂಟಿಕ್ ಸಾಗರ ಎಂದು. ಬರ್ತಾನೆ ನೋಡಿ ಅಮೇರಿಕದ ಎಂಜಿನೀಯರ– ಎವರಿಥಿಂಗ್ ಎಕ್ಸ್‌ಪರ್ಟ್! ಕರೆಸಿ ಅವನ್ನ. ಕೊಡಿ ಕೆಲ್ಸಾನ – ತಮಾ ಒಂದು **ದಶಮುಖದ** (Decilateral) ಸ್ಟೂಲನ್ನು ತಯಾರಿಸಿ ಕೊಡು ಎಂದು. ಮಾಡಿ ಇಟ್ಟಾನೆ ನೋಡಿ ಆವ ನಿಮ್ಮೆದುರಿಗೆ. ಅದನ್ನು ನಿಮ್ಮ ಆಫೀಸ್ ರೂಮಿಗೂ ಹೊರಗಿನ ಗೇಟಿಗೂ ನಡುವೆ ಫಿಕ್ಸ್ ಮಾಡಿಸಿಬಿಡಿ. ಸಿಮೆಂಟ್ ಕಾಂಕ್ರೀಟ್‌ನಲ್ಲಿ ಹೂಳಿ ಮತ್ತೆ. ನೋಡ್ಕೊಳ್ಳಿ.

'ಆಮೇಲೆ ನೋಡಿ ಹಿಡ್ಕೊಂಡ್ ಬನ್ನಿ ಚೋರನ್ನ. ಲೋ ಬಡ್ಡಿ ಹೈದಾ ಇಲ್ಲಿ ಕುತ್ಕೊ ಬಡ್ಡೀ ಅನ್ನಿರಿ. ಅವ ಕೂತ್ಕೋತಾನೆ. ಹೇಗೆ ಕೂತ್ಕೋಬೇಕು ಗೊತ್ತೋ ಅವನು? ಒಂಟಿಕಾಲಮೇಲೆ ಮೀನು ಹಿಡಿಯಲು ಬಕಪಕ್ಷಿ ಕೂತಹಾಗೆ ಕೆರೆ ಏರಿ ಮೇಲೆ! ಶಹಭಾಸ್ ಎನ್ನಿ ಆಗ: ಆಮೇಲೆ ಅವನ ಪಾದಕ್ಕೊಂದು ಬಲವಾದ ಎಮ್ಮೆ ಕಟ್ಟೋ ಸರಪಳಿ ತಂದು ಬಿಗಿಯಿರಿ ಸ್ಟೂಲಿನ ಕಾಲಿಗೆ – ಹಾಕಿರಿ ಅಲಿಘರ್ ಲಾಕನ್ನ. ಎಲ್ಲಿಗೆ ಓಡಿಹೋಗ್ತಾನೆ ಅವ ನೋಡೋಣ!

'ಎಂಥ ಚಮತ್ಕಾರದಲ್ಲಿ ಕೆಲಸವಾಗುತ್ತೆ ಅಂತೀರಿ ಆಗ. ಲೋ ಚೋರಾ ಅಂತ ಕರೆಯಿರಿ. ಅವ ಓ ಅನ್ನೋದರೊಳಗೆ ನಿಮ್ಮ ಕೆಲಸವಾಗಿಬಿಟ್ಟಿರುತ್ತೆ! ಪನಿಷ್‌ಮೆಂಟ್ ಅಂದರೆ ಹೇಗಿರುತ್ತೆ ಗೊತ್ತೇ? ಏಳಬೇಕೆಂದು ಅವನು ಮನಸ್ಸು ಮಾಡೋದೊಳಗೇ ಬಿದ್ದಿರ್ತಾನೆ ನೋಡಿ ತಲೆಕೆಳಗಾಗಿ. ಹೌದೋ ಸುಳ್ಳೋ ಬೇಕಾದ್ರೆ ಮಾಡ್ನೋಡಿ. ಸುಳ್ಳಾದರೆ ಐನ್‌ಸ್ಟೈನನ ಆಣೆ. ಏಡ್ಡಿಂಗ್‌ಟನ್ನನ ಆಣೆ. ಜೀನ್ಸನ ಆಣೆ. ರಾಮನ್ನನ ದೋನಾಣೆ. ಭಟ್ಟನಾಗರರ ಪಾವಾಣೆ!

Punishment is the justice for the unjust. Purposelesness is the fruitful mother of crime. Proverb is the evil of one man and the wisdom of many.'



## ಟೂರಿಂಗ್ ಟಾಕಿ

೧. ಈ ಟೂರ್ನಲ್ಲಿ ನಾನು ಭಾಷಣ ಮಾಡಿದ್ದು ಎಷ್ಟು ಕಡೆ ಗೊತ್ತೇ? ಅಯ್ಯೋ ಅದನ್ನೇನು ಕೇಳ್ತೀರಿ! ಬೆಂಗಳೂರಿಂದ ಪ್ಲೇನ್ ಹತ್ತಿ ಬೊಂಬಾಯ್ನಲ್ಲಿಳಿದು ತಾಜ್‌ಮಹಲ್ನಲ್ಲಿ ತಂಗಿದೆ. ಮುಖ್ಯಮಂತ್ರಿಗಳ ಕಾರು ಬಾಗ್ಲಲ್ಲೇ ಕಾದಿತ್ತು ನೋಡಿ ನನ್ನ ಕರಕೊಂಡು ಹೋಗೋದಕ್ಕೆ. ಹೊರಗೆ ಬಂದ ಕೂಡಲೇ. ಚೌಪಾಟಿಯಲ್ಲಿ ಸಭೆ. ನನ್ನದೇ ಉದ್ಘಾಟನೆ. ಚುನಾವಣೆ ವಿಷಯ. ಪರಚಕ್ರ ಕ್ಷಯಕಾಲಚಕ್ರ ಅಂದರೆ ನಾನೇ ಅಲ್ಲವೆ? ಬಿಟ್ಟೆ ನೋಡಿ ಚೆನ್ನಾಗಿ. ಆ ರಾಜಾಜಿಗೆ

ಬುದ್ಧಿಯಿಲ್ಲ ಅಂದೆ. ಕಮ್ಯೂನಿಸ್ಟರು ಕದೀಮರು ಅಂದೆ. ಪ್ರಸಪಾಪಕ್ಷಕ್ಕೆ ಬುಡವೇ ಇಲ್ಲ ಅಂದೆ. ಜನಸಂಘವ್ರೋ? ದನಸಂಘ. ಹಳೇ ಪರಾಕನ್ನು ಉದ್ಧಾರ ಮಾಡಲಿದ್ದ ಸಂಘ ಅಂದೆ. ಶ್ರೀಮನ್ನಾರಾಯಣ ಹೇಳಿದ ಪಾನಪ್ರತಿಬಂಧದ ಮಾತುಗಳನ್ನೆಲ್ಲಾ ನನ್ನವೆಂದೇ ಹೇಳಿಬಿಟ್ಟೆ! ಚಪ್ಪಾಳೆ ಎಷ್ಟು ಬಿತ್ತು ಅಂತೀರಿ? ಹತ್ತು ಲಕ್ಷ ಜನರದ್ದು!

೨. ಯಾರಾದರೂ ನಡುವೆ ಎದ್ದು ಪ್ರಶ್ನೆಗಿಶ್ನೆ ಕೇಳಿದರೋ ಹೇಗೆ? ಬೊಂಬಾಯ್ ಜನ, ಕೇಳಬೇಕೇ?

೧. ಹೂಂ, ಒಬ್ಬ ಎದ್ದ ನೋಡಿ ಸಲಗ. ಕೇಳೋದಕ್ಕೆ. ಮುಖ್ಯಮಂತ್ರಿಗಳು ಬಾಯಿ ಮುಚ್ಕೊಂಡ್ ಬಿದ್ದಿರಯ್ಯ ಅಂತ ಕೈಸನ್ನೆ ಮಾಡಿದರೆ ಕೇಳಿದ್ನೇ? ಊಹೂಂ. ಕೇಳಲಿ ಬ...ಮಗ ಅಂದ್ಕೊಂಡೆ. ಕೇಳಿದ ಅವನೂ: ಏನಂತ ಗೊತ್ತೇ? ನಿರುದ್ಯೋಗವನ್ನು ನಿಮ್ಮ ಪಕ್ಷ ಹೇಗೆ ಪರಿಹಾರ ಮಾಡುತ್ತೇಂತ. ನನಗೆ ನಗು ಬಂದ್ಹೋಯ್ತು. ಅಲ್ಲಾ ಈ ಮುಂ...ಮಗನಿಗಿಷ್ಟೂ ಹೊಳೆಯ ಬೇಡವೇಂತ. ದೇಶದಲ್ಲಿ ಎಲ್ಲರೂ ಉದ್ಯೋಗಶೀಲರಾದರೆ ನಿರುದ್ಯೋಗದ ಸೊಲ್ಲೇ ಅಡಗಿಹೋಗುವುದು – ಎಂದು ಹೇಳಿ ನಾನವನ ಸೊಲ್ಲಡಗಿಸಿಬಿಟ್ಟೆ! ಬಡಪಾಯಿ ಕೂತುಬಿಟ್ಟ ನೋಡಿ ತನ್ನ ಸೀಟ್ನಲ್ಲಿ. ಹೇಗಿದೆ ಸಂತುರುಷ್ಟ? ಆ ಮೇಲೆ ಮುಖ್ಯಮಂತ್ರಿಗಳೊಟ್ಟಿಗೆ ಡಿನ್ನರ್ ಹೊಡೆದು ಹತ್ತಿದೆ ನೋಡಿ ಪ್ಲೇನನ್ನ—ದಿಲ್ಲಿಗೆ ದೌಡಾಯಿಸೋದಕ್ಕೆ.

೨. ದಿಲ್ಲಿಯಲ್ಲೂ ಮತ್ತೆ ಸಭೆಯಿತ್ತೇನು ಚುನಾವಣೇದು?

೧. ಅಲ್ಲಿದ್ದದ್ದು ಚುನಾವಣೆ ಮೀಟಿಂಗಲ್ಲ. ಅದೊಂದು ಕಾನ್ಫಿಡೆನ್ಷಲ್ ಮೀಟಿಂಗು. ಅದರ ತರಹವೇ ಬೇರೆ. ಅದಕ್ಕೆ ಯಾರ್‍ಯಾರು ಬಂದಿದ್ರು ಗೊತ್ತೇ? ಶ್ರೀಮತಿ ಇಂದಿರಾಗಾಂಧಿ. ಅವರ ತಂದೆ. ಢೇಬರ್ ಭಾಯಿ. ನಿಜಲಿಂಗಪ್ಪನವರು, ವಲ್ಲಭ ಪಂತ್—ಒಬ್ಬರೇ. ಇಬ್ಬರೇ? ನಾಳಿನ ಚುನಾವಣೆಯಲ್ಲಿ ಯಾರ್‍ಯಾರಿಗೆ ಟಿಕೆಟ್ ಕೊಡಬೇಕು ಅನ್ನೋದನ್ನ ನಿರ್ಧರಿಸಬೇಕಾಗಿತ್ತು ನೋಡಿ. ಕಾಂಗ್ರೆಸ್ ಹೈಕಮಾಂಡಿನ ಸ್ವರವೇ ಇಂದು ಅಧಿಕಾರ ಸ್ವರ. ಪ್ರಾಂತೀಯ ಕಾಂಗ್ರೆಸ್ಸುಗಳೆಲ್ಲಾ ಕಾದು ಕೂತಿರಬೇಕು ಅದರ ತೀರ್ಮಾನಗಳಿಗಾಗಿ – ಜೀಯ. ಪ್ರಸಾದ – ಎಂದು. ಅಂಥ ಹೈಕಮಾಂಡಿನ ಮೀಟಿಂಗಿಗೆ ಸ್ಪ್ಯಾಕ್ಷಿಯಸ್ಸಾಗಿ ನಡೆದಿತ್ತು ನಮ್ಮ ಈ ಮೀಟಿಂಗು. ಹಿಂದುಸ್ತಾನದ ಎಲ್ಲ ಪ್ರಾಂತಗಳ ಕಾಂಗ್ರೆಸ್ ನಾಯಕರ ಹೆಸರುಗಳನ್ನೂ ಪಠನ ಮಾಡಲಾಯ್ತು. ಅವರ ಹಣೆಯುಬರಹಗಳನ್ನು ತೂಗಿದೆ ನೋಡಿ ನಾನೂ ತಕ್ಕಡಿಯಲ್ಲಿ ಹಾಕಿ! ಜಾತಿಬಲ–ಧನಬಲಗಳ ಹೆಸರೆತ್ತಿದರೆ ನೆಹರೂ ಅವರಿಗೆ ಕಣ್ಣು ಕೆಂಪಾಗುತ್ತೆ ಅಂತ ನಮಗೆಲ್ಲರಿಗೂ ಗೊತ್ತು. ಆದರೆ ಅವಿಲ್ಲದ

ಯಾವನಿಗೆ ಟಿಕೆಟ್ ಕೊಟ್ಟರೂ ವ್ಯರ್ಥ ಎಂಬುದನ್ನು ನಾವೆಲ್ಲಾ ಅರಿತುಕೊಂಡವರು. ಅದಕ್ಕೇನ್ಮಾಡಿದ್ರಿ ಗೊತ್ತೇ?

೨. ಏನ್ ಸ್ವಾಮಿ. ಬಚಾವ್ ಮಾಡ್ಕೊಳ್ಳೋಕೆ ಸಾಧ್ಯವಿಲ್ಲವಲ್ಲಾ ಇಂಥ ಫಜೀತೀಲಿ ಸಿಕ್ಹಾಕ್ಕೊಂಡ್ರೆ!

೧. ತಾಳಿ ಮತ್ತೆ. ಹೇಳ್ತೀನಿ ನಾವು ಹೂಡಿದ ಹಂಚಿಕೇನ. ನಮಗೆ ಲಾಭಕರವಾದ ಇಸಮ್ಮುಗಳ ಹೆಸರುಗಳನ್ನೇ ತೆಗೆದುಕೊಂಡು ಅವರನ್ನು ಜಾತೀಯತಾ ವಿರೋಧಿಗಳೆಂದೂ ಬಡವರೆಂದೂ ಅಂದರೆ ಅವರಲ್ಲಿ ಕೆಲವರು ವಾಗ್ಮಿಗಳು. ಕೆಲವರು ಶೂರರು. ಕೆಲವರು ತ್ಯಾಗಿಗಳು. ಕೆಲವರು ತಜ್ಞರು ಎಂದೂ ಬಹಳ ಗಂಭೀರವಾಗಿ ವರ್ಣನೆ ಮಾಡಿದ್ವು. ಅವರ ಸಾರ್ವಜನಿಕ. ಸಹಕಾರಿ. ಜನಶಿಕ್ಷಕ ಸೇವೆಗಳನ್ನು ಕಡ್ಡಿ ತೆಗೆದು ಗುಡ್ಡ ಮಾಡಿ ಹೇಳಿದ್ವು!

೨. ನಂಬಿದರೇ ನೆಹರೂ ಅವರು?

೧. ನಂಬದೇ ಏನ್ಮಾಡ್ತಾರೆ ನೆಹರು? ನಂಬ್ಕೊಳ್ಳೋ ಅಂಥ ಕೂಪಿ ನಮ್ಮ ಪತ್ರ ಇರೋವಾಗ! ಬರೆದೆ ನೋಡಿ ನಾಳಿನ ಕ್ಯಾಂಡಿಡೇಟುಗಳ ಹಣೆಯಬರಹವನ್ನ. ಇಡಿ ಹಿಂದುಸ್ಥಾನದಲ್ಲಿ ಯಾರ್ಯಾರೆಂಥೆಂಥವರು ಅನ್ನೋದು ಹೈಕಮಾಂಡಿಗೇನು ಗೊತ್ತಿರುತ್ತೆ? ನಮ್ಮಂಥ ಪ್ರಾಂತೀಯ ಸಿ.ಐ.ಡಿ.ಗಳು ಹೇಳಿದರೆ ತಾನೇ ಗೊತ್ತಾಗೋದು? ಇದ್ವು ಅಲ್ಲಿ ನಮ್ಮಂಥ ೨೦ ಜನ—ಎಂ.ಎಲ್.ಎ. ನಿರ್ಮಾಪಕ ಪಿಂಡಗಳು! ಅಂತೂ ನ್ಯೂಕ್ಲಿಯರ್ ಫಿಷನ್ ನಡೆಸಿ: ರಾತ್ರಿ ಅಶೋಕ್ ಹೋಟೆಲಿನಲ್ಲಿ ಪ್ರೊಗಡ್ದಸ್ತಾಗಿ ಬೀಫ್. ಬಿಸ್ಕೆಟ್. ಬೀರ್ ಎಂಬ 'ಬಿ' ಗ್ರೂಪನ್ನೂ ಆಮ್ಲೆಟ್. ಕಟ್ಲೆಟ್. ಚಾಕ್ಲೆಟ್. ಎಂಬ 'ಟಿ' ಗ್ರೂಪನ್ನೂ ಮುಗಿಸಿ; ಏಂಕ್ಲೆಟ್. ಬ್ರೇಸ್ಲೆಟ್. ರಿಂಗ್ಲೆಟ್‌ಗಳ ಸಂಪರ್ಕ ಪಡೆದು. ಬೆಳಗ್ಗೆ ಎದ್ದು ನೋಡಿ ಕಲ್ಕತ್ತಾಕ್ಕೆ!

೨. ಕಲ್ಕತ್ತಾದಲ್ಲೇನಿತ್ತು ಮತ್ತೆ?

೧. ಏನಿತ್ತು ಅಂತ ಕೇಳ್ತೀರಾ? ಹಯ್ಯೋ ಮಹಾರಾಯರೇ! Ladies are bodies and men are soles in Delhi: and poor men are bodies and rich men are souls in Culcutta! ಏನಂತೀರಿ? "ಬಾರಾಬಂಗಾಳಿ" ಅಂದರೆ ಕನ್ನಡದ 'ಬಾರಾ' ಆಗುತ್ತ್ಯೆ? ಅದು ಬಾಬುಗಳ ರಾಜ್ಯ. ಅವರು ಹೇಳಿದ್ದೇ ಬ್ರಹ್ಮಸೂತ್ರ. ಬಾಬುಗಳ ರಾಜ್ಯಗಳಾದ ರಷ್ಯಾ—ಅಮೇರಿಕಗಳಲ್ಲಿದ್ದ ಹಾಗೇನೇ—ಬಂಡ್ವಾಳಿದ್ದವನ ಬಡಾಯಿ ಮಾತ್ರ ನಡೆಯುತ್ತೆ ಅಲ್ಲಿ. ಕಲಾವಿದರು. ಲೇಡಿಗಳು. ನರ್ತಕರು. ಸಾಹಿತಿಗಳು ಹೊಟ್ಟ್ಯಾಗಿ ತಮ್ಮ ತಮ್ಮ

ಕೆಲಸಗಳಲ್ಲೇ ಬಿದ್ದಿರೋದ್ರಿಂದ—ಕರ್ನಾಟಕದಲ್ಲಿರೋ ಹಾಗೆ ಎಲ್ಲರೂ ಪಾಲಿಟಿಕ್ಸ್‌ಗಿಳಿದೇ ಇರೋದ್ರಿಂದ – ಇದ್ದ ಪಾಲಿಟೀಷನ್ಸ್‌ಗೆ ಸ್ವಾರಾಜ್ಯ !

ಅಂದಹಾಗೆ ಮರಾಠ–ತಮಿಳು–ತೆಲುಗು–ಪಂಜಾಬಿ–ಬಂಗಾಳಿ ಭಾರತಗಳ ಬಗೆಯೇ ಬೇರೆ: ಮಿಕ್ಕ ಭಾರತಗಳ ತರಹವೇ ಬೇರೆ. ಅಲ್ಲಿ ಜಗುಟಿದೆ. ಇಲ್ಲಿ ತೂಗಟಿದೆ–ಅಷ್ಟೆ. ಬಂಗಾಳದಲ್ಲಿ ಗಾಳವಿದ್ಯೆಯಲ್ಲಿ ಹೆಸರಾದವರು ಬಹಳ !

"ನೀರೇ ಇಲ್ದಿದ್ದಲ್ಲಿ ಮೀನಾಗೀನಾ ಹಿಡ್ಯೋ
ಇದ್ರಾ ಇದ್ರೇ ಗಿದ್ರ ಬಂಗಾಳ್ದಲ್ಲೇ"

ಅಂದ ಒಬ್ಬ ಮರ್ಜಡ್ ಮೈಸೂರು ಕವಿ. ಕಾಳಿಪೂಜೆ ಮಾಡೋ ಜನಗಳಲ್ವೇನ್ರೀ ಆ ಜನ? ಕನ್ನಡ ಕಾಳಿ ಅಲ್ಲ ಮತ್ತೆ: ಬಂಗಾಳಿ ಕಾಳಿ–ಬಿಳಿ ಕಾಳಿ–ಸಾಸಿವೆ ಎಣ್ಣೆ ಹಚ್ಚಿಕೊಳ್ಳೋ ಕಾಳಿ ! ಆದರೆ ಅಲ್ಲಿಯ ನಗರಗಳಾದರೋ—

"ಬಾಬೂ ಬನೇಹುಯೇ ಹೈ ಕಾಲರ್ ಲಗಾನೇವಾಲೇ !"

ಎಂಬಂತಹ ಅರ್ಥಾತ್ ನನ್ನಂಥವರ ನಾಯಕತ್ವದಲ್ಲೇ ನಡೆಯುತ್ತವೆ. ಅದು ರಾಜಭಾರತ. ರಮಾಭಾರತ–ಇಂಗ್ಲೀಷ್ನಲ್ಲಿ ಹೇಳೋಹಾಗೆ—

One pimple of a lady's face
May teach you more of man
Of moral evil and of good
Than all the sages can!

ಬೆಂಗ್ಳೂರ್ ಡ್ರಿಂಕ್ಸೆಲ್ಲಾ ಬಂಗಾಳಾ ಡ್ರಿಂಕ್ಸ್ ಹಾಗೇನೇ. ಮೈಸೂರ್ ಪ್ರದೇಶ ಕಾಂಗ್ರೆಸ್ ಕಾರ್ಯಸಮಿತಿ ಬಂಗಾಳದ್ದಿದ್ದಾಗೇನೇ–ಆದರೆ ಬಂಗಾಳದಲ್ಲಿರೋ ಮೀನು ತಿಂದ ಬುದ್ಧಿ ಬೆಂಗಳೂರಿಗಿಲ್ಲ. ಅದ್ದರಿಂದಲೇ ಎಷ್ಟೋ ಸಲ ಹೈ ಕಮಾಂಡಿನಿಂದ ಒದೆತ ತಿನ್ನಬೇಕಾಗುತ್ತೆ ನಮ್ಮ ಗುಂಡಿನ ರಾಜಕೀಯ. ಆದರೆ ಅದನ್ನೆಲ್ಲಾ ಕಟ್ಕೊಂಡ್ ನನಗೇನಾಗ್ಬೇಕ್ ಹೇಳಿ? ನನ್ನ ವಿಹಾರ. ನನ್ನ ಆಹಾರ ನನ್ನ ಪ್ರಹಾರ–ಒಂದು ಸ್ಫೂರ್ತಿ ಬಂದ್ಬಿಟ್ಟಿತು–ಹೇಳ್ಲಿದ್ದಾ?

ಕಲ್ಕತ್ತೆಯಲ್ಲೊಂದು ಕಲ್‌ಕತ್ತೆಯಿತ್ತು
ಬೀಸಿರಾಯನ್ ಎಂದದಕೆ ಹೆಸರು ಮತ್ತಿತ್ತು:
ಎತ್ತುಗಳ ಕಟ್ಟಿಕೊಂಡರಸುಗೈದಿತ್ತು
ಬಂಗಾಳಿ ಮಿದುಳಿಗದು ಚಿಪ್ಪು ಎನಿಸಿತ್ತು.
ಪರರ ದಾಟಿವ ಸುಟಿಕೆ ಸಮವೆನ್ನುತ್ತಿತ್ತು:
ಬರಡೆಮ್ಮೆ ಹಾಲ್ ಮರಿಗಳಿಗೆ ಕುಡಿಸುತ್ತಿತ್ತು !
ಅಸ್ಸಾಂ ಗಲಾಟೆ ಬಿಸಿಲಿಗೆ ಕರಿಚಿತ್ತು.

ದುರ್ಮರಾಟಿಗ ಕಿವಿಯನುದ್ದ ಬೆಳೆಸಿತ್ತು;
ಕಾಮರಾಜೀಯರೊಡನೊಳಸಂಚಿಸಿತ್ತು—
ರಾಜಾಜಿಯಿಂಗ್ಲೀಷನಾಕರ್ಷಿಸಿತ್ತು !
ಬಾಬುಕತ್ತೆಯ ಬಲ್ಮೆಯನು ಹೆಚ್ಚಿಸಿತ್ತು,
ಬಡಕತ್ತೆಗಳ ಗೋಳ ಮೂಲೆಗೊತ್ತಿತ್ತು;
ದಿಲ್ಲೀಶ್ವರರ ಕೃಪೆಯನುಂಡು ಬದುಕಿತ್ತು,
ಅದು ಮಾಡಿರುವ ಗತ್ತು ನನಗಷ್ಟೆ ಗೊತ್ತು
ಹರಿಕೃಷ್ಣಮೆಹತಾಬನವಕಿಂತ ಪೆದ್ದ
ಗಣತಂತ್ರದೊಡನಾಡಿ ಸುಟ್ಟಿತ್ತು ಗಡ್ಡ !
ಪಂಜಾಬಿ ಕೈರೊನನೊಬ್ಬ ಸಮನೆಂದು
ಹೇಳಬಹುದದಕೆ ತಾಂತ್ರಿಕತೆಯಲಿ ಮಿಂದು !

ಹೇಗಿದೆ ಸ್ಫೂರ್ತಿ ನನ್ನದು? ಸ್ಫೂರ್ತಿ ಬರೋಹಾಗೇ ಇದೇರೀ (Situation) ಸಿಚುಯೇಶನ್ನು ! ನಗತೀರೇಕೆ? ಸರ್ವಜ್ಞ ಹೇಳಲಿಲ್ಲವೆ?—

"ಹೋದಾಗ ಬಂದಾಗ ಬಾಗಿಲನು ತೆರೆದಿಣುಕು
ಬೋಧೆಯಿಲ್ಲದನವ್ರೋಲ್ ಹಣಕು—
ತಿಣುಕು ವಿದ್ಯಾದರವರಿವರು ಸರ್ವಜ್ಞ !"

ಬೆಂಗಳೂರಿನಲ್ಲಿ ಬೆಳದೋನಿಗೆ "ಬಂಗಾಳಿ"ಬರೋದಿಲ್ವೇ?
ತಂಗಳನ್ನಾ ತಿಂಬೋನಿಗೆ ತರಕಾರಿ ಹಂಗಿದೆಯೆ?
ಅಂಗಳದಲ್ಲಾಡೋನಿಗೆ ಮಂಗಳಾರತಿ ಬೆಳಕು ಬೇಕೆ?
ಇಂಗಲನ್ನಾ ಬೆಟ್ಟೋಳಿಗೆ ಬಂಗ್ಲೆಯೇತಕ್ ಹೇಳಿ?
ಪಾಲಿಟಿಕ್ಸನಲ್ಲಿ ಬಿದ್ದೋನಿಗೆ ಪಾಪ-ಪುಣ್ಯ ಇರುತ್ತೈತೇ?
ಚರ್ಮಪ್ರಿಯರಿಗೆಲ್ಲಾದರೂ ಕರ್ಮಪ್ರಿಯತೆ ಬಂದೀತೇ?
ಅಧಿಕಾರದ ಅಫೀಮಿರೋವಾಗ ಅವಮಾನಾನ ಕೇರ್ಮಾಡ್ತಾರ್ಯೇ?
ಅಪ್ಪಾ ಅಮ್ಮಾ ಸತ್ಮೇಲೆ ಮನೆದೇವರಿಗೆ ಮಸಾಣ ಗತಿ ಅಲ್ವೇ?

Dress is man and man is dress.

The universe is the dress of God.

Appearance is reality and reality is an appearance.

Selfishness is individuality and individuality is the essence of liberty.

Advocation of equality perpetuates inequality where Democracy is a maya and Oligarachy is Brahman.

ಸ್ವಾಮಿ. ಕಲ್ಕತ್ತೆಯ ಮರ್ಘಾನೇ ಬೇರೆ. ಅಲ್ಲಿ ಲೇಡೀಸ್ ಕಾನ್ಫರೆನ್ಸ್, ಲೇಬರ್‌ರ್‍ಯಾಲಿ, ಸ್ಟೂಡೆಂಟ್ಸ್ ಕನ್ವೆನ್ಷನ್ ಎಂಬ ಮೂರಕ್ಕೂ ನಾನೇ ಮುಖ್ಯ ಅತಿಥಿಯಾಗಬೇಕಾಗಿಬಂತು. ಮೂರುವರ್ಗಗಳಿಗೆ ಮೂರು ಅಡ್ವೈಸುಗಳು: ಲೇಡೀಸ್ ಯಾವಾಗ್ಲೂ ಮುಂದಕ್ಕ ಫ್ಯಾಷನ್ಸ್ ಅಗ್ಗಿರ್ಬೇಕು. ಲೇಬರ್ರು ಇಂಡಸ್ಟ್ರಿಯಲ್ ಬ್ಯಾಕ್‌ವರ್ಡ್‌ನೆಸ್‌ನಿಂದ ದೇಶವನ್ನು ಡಲಿವರ್ ಮಾಡ್ತಾನೇ ಇರ್ಬೇಕು. ಸ್ಟೂಡೆಂಟ್ಸ್ ಯಾವಾಗ್ಲೂ ಎಕ್ಟಿವ್ ಸೋಷಲ್ ಸರ್ವೀಸ್ ಮಾಡ್ತಿರ್ಬೇಕು—ಸಾಲದೇ. ಇನ್ನೇನ್ ಬೇಕು ಬರುಡೆ? ಕಲ್ಕತ್ತಾದಲ್ಲಿ ನೋಡ್‌ಬೇಕಾದ್ದನ್ನೆಲ್ಲಾ ನೋಡಿ ಮದ್ರಾಸಿಗೆ ಬಂದೆ. ಕಾಮರಾಜ್ ಅಂದರೆ ಕಾಮಧೇನು. ಅವನ್ಹತ್ರ ಕಿವಿಕಚ್ಚಿ, ವಾಸನ್ನನ ಆತಿಥ್ಯವನ್ನು ದಾಸಪ್ರಕಾಶದಲ್ಲಿ ಸ್ವೀಕರಿಸಿ. ಅಲ್ಲಿ ಐ.ಎ.ಎಸ್ ಅಡ್ವೈಸರಾಗಿರೋ ಬ್ರದರ್ ಇನ್ಲಾನ್ ಮಾತ್ನಾಡಿಸಿ. ಉಳಕೋ ಅಂದರೆ ಪುರುಸೊತ್ತಿಲ್ಲಾ ಅಂತ. ಹೇಳಿ ನಡೆದೆ ನೋಡಿ ಹುಬ್ಬಳ್ಳಿಗೆ. ಹುಬ್ಬಳ್ಳಿಯಲ್ಲೋ ಮಟನ್ ಸ್ಪೆಶಲ್ಲು, ಆರ್ಟ್ಸ್ ಸರ್ಕಲ್ ಪ್ರೋಗ್ರಾಮು, ಪತ್ರಿಕಾ ಸಂಸ್ಥೆಗಳ ಆತಿಥ್ಯ. ಕ್ಯಾಂಡಿಡೇಟುಗಳಿಗೆ ಆಶ್ವಾಸನ—ಒಂದೇ ಎರಡೇ ಬಿಸಿನೆಸ್ಸು?

೨. ಬಿಸಿನೆಸ್ಸೂ ಆಯ್ತೋ ಅಲ್ಲಿ ತಮಗೆ?

೧. ಹೌದು; ಹುಬ್ಬಳ್ಳಿ ಅಂದ್ರೇ ಗೊತ್ತಿಲ್ವೇ ಒಳ್ಳೇ ಬಿಸಿನೆಸ್ ಸೆಂಟ್ರು! ಅಲ್ಲಿರೋ ಬಿಸಿನೆಸ್ ಕಿಂಗ್ಸ್‌ನ್ನ ಬುಟ್ಟೀಗೆ ಹಾಕ್ಕೊಳ್ಳೋ ಇದ್ರ ಕೆಲಸವಾಗುತ್ತೆಯೋ ಹೇಳಿ? Congress means business and business means Congress! I am a Congress business!

೨. ಸ್ವತಂತ್ರಪಕ್ಷ ಇದೆಯಲ್ಲಾ, ಸ್ವಾಮಿಬಿಸಿನೆಸ್ನೋರನ್ನ ಎತ್ತಿ ಹಾಕೋದಕ್ಕೆ?

೧. ಅಯ್ಯೋ ರಾಜಾಜಿ ಪಕ್ಷಕ್ಕೆ ಸೇರೋರು ಬರೇ ಹಳೇ ಜಮೀಂದಾರ್ರು. ಬಿಸಿನೆಸ್ನೋರವರ್ಗಿಂತ ಪ್ರಾಫಿಟ್ ಇದ್ದಾರೆ ಕಣ್ರೀ! ನಾನು ನೂರು ಕಂಟ್ರಾಕ್ಟುಗಳಿಗೆ ಆಗಲೇ ಸ್ಯಾಂಕ್ಷನ್ ಮಾಡ್ಸೋ ವ್ಯವಸ್ಥೆಯ ಜವಾಬ್ದಾರಿ ಹೊತ್ತು ಬಂದಿದ್ದೀನಿ ಹುಬ್ಬಳ್ಳಿ ಸೈಡಿನ ಸಾಹುಕಾರರಿಗಾಗಿ – ಏನಂತೀರಿ? ಅವೆಲ್ಲ ಗ್ಯಾರಂಟೀ ಮಾಲುಗಳು ಸ್ವಾಮೀ. ಗ್ಯಾರಂಟೀ ಮಾಲುಗಳು! ನಾ ಫೋನ್ ಮಾಡ್ದೇ ಅಂದ್ರ ಎಲ್ಲಾ ರೆಡಿ ಮಾಡಿಟ್ಟಿರೋ ಜನ ಅಲ್ಲೀದು. ಇಲ್ನೋಡಿ ಈ ಗೋಲ್ಡ್ ರಿಸ್ಟ್‌ವಾಚು ಯಾರು ಕೊಟ್ಟಿದ್ದು ಅಂತ ತಿಳ್ಕೊಂಡಿದ್ದೀರಾ? ಬಾಂಬೆ ಬಿಸಿನೆಸ್ಸಿನ ಜನಾ ಅವರು ಅವರಿಗೆಲ್ಲಾ ಹೇಳಕೊಡ್ಬೇಕೆ? ಇನ್ನು ಪ್ರೆಸೆಂಟೂ ಎಲ್ಲಾ ನಮ್ದೇ – ನಮ್ದಲ್ಲಿ

ದವನ್ನ ಸಂದರ್ಭಕ್ಕೆ ಬೇಕಾದಾಗ ನಮ್ಮವನ್ನಾಗಿ ಮಾಡಿಕೊಳ್ಳೋದು ಹೇಗಂತ ನಿಮಗ್ಗೊತ್ತಿಲ್ವೇ?

೨. ಇನ್ನೇನ್ ಬಂತಲ್ಲಾ ಬೆಂಗಳೂರು. ನಮ್ಮ ಕಲ್ಯಾಣನಗರ.

೧. ನೀವ್ ಹುಬ್ಬಳ್ಳಿಗೇತಕ್ಕೋಸ್ಕರ ಹೋಗಿದ್ರಿ?

೨. ನಾನೇ ನಮ್ಮ ಹುಡುಗಿಗೆ ಒಂದು ವರಾ ನೋಡ್‌ಬೇಕಂತ ಹೋಗಿದ್ದೆ.

೧. ಅಯ್ತೇನು ಹೋದ ಕೆಲ್ಸ?

೨. ಅಗ್ದೇ ವಾಪಸ್ ಬರ್ತೇನಯೇ ಸ್ವಾಮಿ? ನಾನು ಅವರ ಹುಡುಗನಿಗೆ ಅಸಿಸ್ಟೆಂಟ್ ಕಮಿಶನ್ನರ ಗ್ರೇಡ್ನ ಏರಿಸೋ ವ್ಯವಸ್ಥೆ ಮಾಡ್ತೀನಿ ಅಂತ ಹೇಳಿದ್ಮೇಲೆ ಒಪ್ದೇ ಯಾರು ಉಳಿತಾರೇ? ನಮ್ಮ ಚಿಕ್ಕಮಾವ ಅಗ್ಗೇಕು ರವಿನ್ಯೂ ಮಿನಿಸ್ಟ್ರು ಅನ್ನೋದು ನಿಮಗ್ಗೊತ್ತಿಲ್ವೇ? I am a Congress Influence!

೧. ಇನ್ನೂ ಒಂದ್ಸಲ ಹಾಗ್ನ. ಕಾಂಗ್ರೆಸ್ ಪವರ್ನಲ್ಲಿರೋವಾಗ ತಾನೇ ನಿಮಗಿದೆಲ್ಲಾ ಸಾಧ್ಯ? Congress is the greatest God that confers boons on the clever classes!

ಇದ್ಯಾವನೋ ಈತ–ರೈಲ್ನಲ್ಲೇ ಹಾಡೋಕ್ಕಾರಂಭಿಸಿದ್ನಲ್ಲಾ.

೨. ಹಾಡ್ಲಿ ಸ್ವಾಮಿ. ಸುಮ್ನಿರಿ. ಕೇಳೋಣ – ತಮಾಷೆಯಾಗಿದಾನೆ!

"ಮೈಸೂರ್ ಹುಲಿಯಾ ಹಾವಳಿ ಕೇಳಿ ವಾರ್ನಿಂಗ್ ಅಕ್ಬರ ಫೌಜ್ ಬಂತು:

ಮೈಸೂರ್ ಇಲಿಗಳ ಹಾವಳಿಯಿಂದ ಬಡವರ ಬಾಳಿಗೆ ಬರ ಬಂತು!
ಅಜಬ್ ತಮಾಷ್ ಈಸ್ಟಿಂಡಿಯಾ ಕಂಪನಿ ಇಂಗ್ಲೀಷರ ನೆಲೆಯಾಗಿತ್ತು:
ಅದೇ ಮಾದರಿಯ ಕಾಂಗ್ರೆಸ್ ಕಂಪನಿ ಲಂಚದ ಬಿಸಿನೆಸ್ ಬೆಳೆಸಿತ್ತು!
ಹೆಂಡಾ ಹೆಂಡ್ತೀ ಕನ್ನಡ್ ಪಬ್ಲಿಕ್ ಅಂದ್ರೇ ರತ್ನಂಗ್ ಪ್ರಾಣ್ವಂತೆ.
ಚಾಮುಂಡೇ ತುಂಬಾ ಕುಡ್ ಬುಟ್ಟಾ ಕೆಂದ್ರ ರಾಜ್ಯದ ದರ್ಬಾರ್ ನಡಸ್ದಂತೆ!
ಬುದ್ಧೀ ಪೇಪರ್ ಹೇಳೋ ಬಾತ್ಮೀ ಬುಂಡವ್ನಗ್ ನೀರಡ್ಕಿ ತರ್ತೈತೆ
ಕಾರ್ವಾರ್ ಕಡೆಯ ಸುದ್ದಿ ಕೇಳಿವರ್ ಬಿಜಾಪುರಕ್ಕೆ ಬರ್ತೈತೆ!"

## ಅಪ್ಟುಡೇಟ್ ಪುರಾಣ

೧. ಮೈಸೂರಿಗೆ ಐಸೋರಿ (Eysore) ಅಂತೆ ಮೈಸೋರುಗಳೀಗ ಹತ್ತು. ಆದರ ರಾಜಕೀಯ ಗಂಡಭೇರುಂಡಕ್ಕೆ ತಲೆಯೆರಡಿದ್ದರೂ ರೆಕ್ಕೆಗಳೂ ಎರಡೇ ಇದ್ದವು. ಈಗಲಾದರೋ ಹತ್ತು ಪಕ್ಷಗಳು. ಕಾಂಗ್ರೆಸ್ – ಅದು ಮಹಾರಾಷ್ಟ್ರ ಏಕೀಕರಣ ಸಮಿತಿ – ಅಂತಹಾದ ನಿಶಪಕ್ಷಗಳ ದಶಾವತಾರದ ಮೇಳವೀಗ

ರಾಜಧಾನಿ. ಜಿಲ್ಲಾಧಾನಿ. ತಾಲೂಕುಧಾನಿ. ಗ್ರಾಮಧಾನಿಗಳಲ್ಲೆಲ್ಲಾ ಆಟವಾಡಲಾರಂಭಿಸಿದೆ: ಸಂದಿಗೊಂದಿಗಳಲ್ಲೆಲ್ಲಾ ಸಮಾರಾಧನೆಗಾರಂಭಿಸಿದೆ: ತನ್ನ ದಶಕುಮಾರರಿಪುಚರಿತ್ರವನ್ನು ಹೆಮ್ಮೆಯಿಂದ ಹೇಳಿಕೊಳ್ಳಲಾರಂಭಿಸಿದೆ. ಅದರ ವೈಶಿಷ್ಟ್ಯವನ್ನು ಕುಮುತಾಪುರದ ಹೆಗ್ಗಡೆ ಊರಿನ ತೇರಿನಲ್ಲಿ ಚೆನ್ನಾಗಿ ಕಾಣಬಹುದಾಗಿತ್ತು. ದಶಪಾತ್ರಗಳೂ ಏಕಕಾಲದಲ್ಲಿ ದಶರಂಗಗಳಲ್ಲಿ ದಶಕಂಠಗಳಿಂದ ತಂತಮ್ಮ ಬಿರುದು-ಬಾವಲಿ. ಸಾಧನೆ-ಛೇದನೆ. ಧಾರಣೆ-ಸುಧಾರಣೆ. ಖಂಡನೆ-ಮಂಡನೆ. ಬಂಡವಾಳ-ಬಡಾಯಿ. ಕೀರ್ತಿ-ಸ್ಫೂರ್ತಿ. ಮಂತ್ರ-ತಂತ್ರ. ಆಧಾರ-ಉದ್ಧಾರಗಳನ್ನು ಉಲ್ಲೇಖಿಸುತ್ತಿದ್ದುದನ್ನು ನೋಡಿದರೆ, ಶ್ರೀಮದ್ರಾಮ-ರಸನ್ಮಹಾರ ಪರಾಕ್ರಮಕಂಠೀರವನನ್ನು ಲಂಕಾಸ್ಥಾನ ವಿದೂಷಕನು ಸ್ವಾಗತಿಸಿದ್ದು ಗೊತ್ತೇ? ಹಾಗೆನ್ನಿಸಿತು !

ವಿ. ಗೊತ್ತಿಲ್ಲಾ ಸ್ವಾಮಿ. ಅಪ್ಪಣೆ ಕೊಡಿಸಿದರೆ ಅವಧರಿಸುತ್ತೇನೆ.

ಭ. ಭಳಿಭಳಿರೆ ದಶಕಂಠ. ಭಾಗ್ಯಹೀನರ ನೆಂಟ.
ಗಳಿಗಳಿಗೆಗೊಂದೊಂದು ರೂಪ ತಾಳುವ ಬಂಟ:
ತಿಳಿದೂ ತಿಳಿದು ಹಾಕಿಕೊಂಡೆ ಕೊರಲುರುಳ್ಗಂಟ-
ಎಡಹದಿರು ಎದುರಾಯ್ತು ನಿನ್ನ ಗದ್ದೆಯ ಕಂಟ !

ವಿ. ಯಾರು ಸ್ವಾಮಿ? ನಾನು ರಾವಣನೇ? ಏನ್ರೀ ಹೀಗಂತೀರಾ?

ಭ. ಕ್ಷಮಿಸಿ; ನಾನು ಹೇಳಿದ್ದು ವಿದೂಷಕನು ರಾವಣನನ್ನು ಸ್ವಾಗತಿಸಿದ್ದನ್ನು – ತಮ್ಮನ್ನ ಅಂತ ತಿಳಕೊಂಡರಾ? ಅಯ್ಯೋ. ಪಾಪ! ಎಲ್ಲಿ ಬಂತು ಸ್ವಾಮಿ?

ವಿ. ತಮಗವರನ್ನು ಹಾಗೇ ಸ್ವಾಗತಿಸಬೇಕೆನ್ನಿಸಿತೇ?

ಭ. ಅದೇ: ಹೇಳಿದ್ದೇ ಹಾಗೆ ನಾನು. ಏಕೆಂದರೆ ಅದೇ ೪ ದಿನಗಳ ಹಿಂದೆ.

"ಕಾಂಗ್ರೆಸ್ ಕಾಂಗ್ರೆಸ್ ಕೂಡಿದ್ರಣ್ಣ
ಕಾಂಗ್ರೆಸ್ ಕೋಲಾಡಿದ್ರಣ್ಣ
ಕಾಂಗ್ರೆಸ್ಸೇಕೆ ಕೋಲು
ಹೊಡ್ದಾಡ್ಕೊಳ್ಳಲ್ ಮೇಲು !"

ಅನ್ನೋ ಪರಿಸ್ಥಿತಿ ಉಂಟಾಗಿತ್ತು ನಮ್ಮ ಭಾವಿ ಮುಖ್ಯಮಂತ್ರಿಗಳು ಬಂದಾಗ. ಹಸ್ತಾಹಸ್ತಿ. ಮುಷ್ಟಾಮುಷ್ಟಿ. ಪಾದಾಪಾದಿ. ಜಿಹ್ವಾಜಿಹ್ವಿಗಳು ನಡೆದುಹೋದವಂತೆ ! ನಾಮಪತ್ರ ಪ್ರಕರಣದ ದುರಂತ ನಾಟಕಕ್ಕೆ ನಾಂದಿಯನ್ನು ಆಡಿ ತೋರಿಸಿದ ಬಳಿಕ ಪ್ರಜಾರಾಜ್ಯ ಜಾತ್ರಾಪ್ರಚಾರಕ್ಕೆ ಸ್ಪರ್ಧೆಯಿಂದ ಹೊರಟ ಈ ಪೈಕಿಯು, ಇತರ ಪೈಕಿಯು ಮತ್ತು ಹಳೇ ಪೈಕಿಯ ವೀರಾಧಿವೀರರ ರಣಗರ್ಜನೆ ಸಮುದ್ರವನ್ನು ಗಡಗಡನೆ ನಡುಗಿಸಿತು !

೨. ಹಳೇ ಪೈಕಿಯವರೆಂದರೆ ಯಾರು ಸ್ವಾಮಿ?

೧. ಹಿಂದುಳಿದವರು. ಹಿಂದುಗಳ ಜಾತಿಯವರು. ಅಸ್ಪರ್ಶಕರು. ಜನರು. ಆಡಳಿತದ ಸುಧಾರಣೆಗೆ ಪ್ರಥಮ ಪ್ರಾಶಸ್ತ್ಯ ಕೊಡುತ್ತೇವೆ ಎನ್ನುವವರು!

೨. ಅಂಥವರು (Bad Government is batter than foreign (Hindu) Government ಅಂತ ತಿಳಕೊಂಡು ಸ್ವದೇಶಿಗೆ ಮತ ಕೊಡಬೇಕು. ತಾಯ್ನಾಡಿಗಿರಬೇಕಾದ ತಾಯ್ತನ ಇರಬೇಡವೇ ಮತದಾರರಿಗೆ?

೧. ಹೌದು, ಹೌದು: ದೇವರ ಆಸ್ತಿಕ್ಯದಿಂದ ಹೊಟ್ಟೆ ತುಂಬಿಕೊಂಡು ಬಂದವರಿಗೆ ದೇಶದ ಆಸ್ತಿಕ್ಯದ ಪ್ರಯೋಜನ ಗೊತ್ತಾಗುತ್ತೆಯೇ? ಅಷ್ಟಗ್ರಹಗಳಿಗೆ ಹೆದರಿ ಅಗ್ನಿಯ ಹೊಟ್ಟೆ ಹೊರೆದಾರಲ್ಲದೆ. ದೇಶದ ಬಡವರ ಹೊಟ್ಟೆಯ ಅಗ್ನಿಯನ್ನು ಶಮನಮಾಡಲು ಹೊರಟಾರೇ? ಎಲ್ಲಿ ಬಂತು ಸ್ವಾಮಿ – ಈ ದೇವಜನರೆಂದಾದರೂ ದೇಶಜನರಿಗಾಗಿ ಆಡಳಿತ ಸುಧಾರಿಸುತ್ತಾರೆ ಎಂದು ತಿಳಕೊಂಡಿರಾ! ಭಾರತದೇವಿಯ ಗುಡಿ (officer)ಗಳ ಮೊಕ್ತೇಸರಿಕೆ ಹಿಡಿದು ಧನಸ್ವಾಹಾಯಜ್ಞಕ್ಕಾರಂಭಿಸದೆ ಉಳಿದಾರೇನಿವರು?

೨. ಹಾಗಾದರೆ ನೀವೆನ್ನೋದಾದರೂ ಏನು? ಸ್ವಲ್ಪ ಖುಲಾಸುಮಾಡಿ ಹೇಳಿ.

೧. ನಾನನ್ನೋದು ಈ ಇಬ್ಬಣಗಳಿಗೂ ಬೇಡ ಆದರೋಪಚಾರ. ಈ ಯೆರಡೂ ಪಾರ್ಟಿಗಳಿಗಿಂತ ಸ್ವತಂತ್ರ ಪಾರ್ಟಿಯೇ ಸದ್ಯ ಸರ್ವೋತ್ತಮ ಅಂತ. ಯಾಕಂದರೆ ಅದು 'ದೇಶ. ಕಾಲ. ಕಾರ್ಯ' ನೋಡಿ ಆಡಳಿತ ನಡೆಸುವೆನನ್ನುತ್ತದೆ. ಮದ್ರಾಸ್ ಬಿಳಿ ಚೀಟಿ ಏನಂದಿದೆ ಗೊತ್ತೇ? 'The benefit of the two plans has generally not reached the common man!'

೨. ಸ್ವಾಮಿ. ಬೇಜಾರು ಮಾಡಬಾರದು; ಸಾವ್ಕಾರರ ಪಕ್ಷಕ್ಕೆ ನಾನಂತೂ ಮತ ಕೊಡಲಾರೆ. ಅವರು ಹಿಂದಿನ ಸಾವ್ಕಾರರಲ್ಲ. ಇಂದಿನ ಐಷಾರಾಮ ಪರಂಪರೆಯವರು!

೧. ಹಾಗಾದರೆ ಮಹಾರಾಷ್ಟ್ರ ಸಮಿತಿ ಆಗಬಹುದೋ?

೨. ಬಹಳ ಚೆನ್ನಾಗಿ ಹೇಳ್ತೀರಿ. ಆ ಒರಟು ಜನಗಳ ಕೈಯಲ್ಲಿ ಸಿಕ್ಕಿದರೆ ಆಗ್ಹೋಯ್ತು. ಕೊಳ್ಳಿದೆವ್ವಗಳಿಗೂ ಅವರಿಗೂ ವ್ಯತ್ಯಾಸವಿದೆಯೇ? ವಾನರರಿದ್ದದ್ದೇ ಆ ಕಿಷ್ಕಿಂಧೆಯಲ್ಲಿ.

೧. ಹಾಗಾದರೆ ಪಿ. ಎಸ್. ಪಿ.ಗೆ ಹಾರ ಹಾಕ್ತೀರಾ?

೨. ಹಾರ ಹಾಕೋಕೆ ಇದೇನು ಸ್ವಯಂವರವೇನು? ಪಿ.ಎಸ್.ಪಿ. ಅಂದರೆ 'ಪುಸ್ಸ್' ಅಂತ; ನೀರು ಸೌದೆ ಒಲೆಗೆ ಹಾಕಿ 'ಪುಸ್ ಪುಸ್' ಅಂತಊದೋ ಅಡುವಳಿತಿ ದರ್ಬಾರ್ ಅದರದು.

೧. ಹಾಗಾದರೆ ಕಮ್ಯುನಿಸ್ಟ್ ಪಕ್ಷಕ್ಕೇನು ನಿಮ್ಮ ಅಮೂಲ್ಯ (Value less) ಮತ?

೨. ಆ ಕಾಟಕ ಜನರ ಕೈಯಲ್ಲಿ ತಲೆ ಯಾರು ಕಟ್ಟಿಕೊಳ್ತಾರೆ ಹೇಳಿ. ಅವರದ್ದೋ ತಳವಿಲ್ಲದ ಪೀಪಾಯಿ: ಅದರಲ್ಲವರು ನೀರು ತುಂಬಿಸ್ತಾರಂತೆ. ನ್ಯಾಯ ನೀತಿಗಳ Standard ಗಳನ್ನು ಪೂರ್ಣಗತಗೊಳಿಸಿ ಭ್ರಷ್ಟಾಚಾರ ನಿಲ್ಲಿಸೋ ನಿಷ್ಠಾಚಾರಿಗಳವರು. ಬಿಳಿಯ ಟೋಪಿಗಳಿಗಿಂತ ಬಹಳ ಬುದ್ಧಿವಂತರೆಂದು ಕೊಂಡ್ರಾ ಅವರನ್ನ? ಚೆನ್ನಾಯ್ತು!

೧. ಇನ್ನುಳಿದವು ಸಮಾಜವಾದಿ. ರಿಪಬ್ಲಿಕ್. ದ್ರಾವಿಡಕರಗ. ಲೋಕ ಸೇವಾ ಸಂಘ—ಇಷ್ಟೇತಾನೇ? ಯಾರ ಕರಗ ಹೊರತೀರಿ ಹೇಳಿ!

೨. Information is the language of a beautiful eye upon a sensitive heart ಅಂತಾರಲ್ಲಾ ಹಾಗಾಯ್ತು ಜನಗಳ ಮತದಾನ ವಿಶ್ಲೇಷಣೆ: ಕೊಂಕುನೋಟಕ್ಕೆ ನೇರವಾದ [illegible]ದ ಮಣಿಯುತ್ತದೆಯಂತೆ. ಮಟಮಟ ಮಧ್ಯಾಹ್ನ ಅಲ್ಲವೇನ: ಮತ ಮತ ಮಧ್ಯಾಹ್ನ! ವ್ಯಕ್ತಿಗಿಂತ ಸಂಸ್ಥೆ ದೊಡ್ಡದು ಅಂತ ಬೋಧಿಸುವ ವ್ಯಕ್ತಿತ್ವಕ್ಕೆ ಬೆಲೆ ಇದೆಯೇ? ಸಂಸ್ಥೆ ವ್ಯಕ್ತಿಯಲ್ಲ ವಾದ್ದರಿಂದ ಅದಕ್ಕೆ ಮೊದಲೇ ವ್ಯಕ್ತಿತ್ವವಿಲ್ಲ: ಅದಕ್ಕಿದೆ ಅಂತ ನಂಬಿರೋ ಬೋಧ ಕರ ನಂಬಿಕೆ ಅವರಿಗಿಲ್ಲವಾದದ್ದೇ ಆಧಾರ. ಈ ಅವ್ಯಕ್ತರ. ಪ್ರಾಕೃತರ. ಪಾರ್ಟಿ ಪ್ರಿಯರ (Tea or political or wiskey party!) ಪಾಂಚಜನ್ಯ ಕೇಳಿ ಅಮೂಲ್ಯ ಮತವನ್ನು ನಿರ್ಮೂಲಗೊಳಿಸಬೇಕೇ? ಎಂದಿಗೂ ಸಾಧ್ಯವಿಲ್ಲ ಸ್ವಾಮಿ.

೧. ಅಂದರೆ ಅತಂತ್ರರಾದ ಸ್ವತಂತ್ರರಿಗೋ ತಮ್ಮ ಮತ? ನಿಸ್ಸ್ವರತ್ವ ವನ್ನು ಮರೆಮಾಚಲು ಅಪಸ್ವರವನ್ನು ಅಪರೂಪವಾಗಿ ಎತ್ತುವ ಮೌನಗೌರಿ ಯಪ್ಪಗಳಿಗೊ?

೨. ಅಲ್ಲ: ನನ್ನದೇ ಒಂದು ಪಕ್ಷವಿದೆ. ನಾನೇ ಒಬ್ಬ ಕ್ಯಾಂಡಿಡೇಟು. ನನ್ನದು ನಿಷ್ಪಕ್ಷ ಪ್ರಜಾಪ್ರಭುತ್ವ ಪಕ್ಷ (Partiless Democracy party) "ಜಾತ್‌ಪತ್ ತೋಡಕ್ ಸಂಘ" ಇದ್ದಹಾಗೆ. ರೈತ ಸಂಘಕ್ಕಿಂತ ದೊಡ್ಡದಾದ ಬಡಸಂಘ!

೧. ಈ ಸಮಾಚಾರ ನನಗ್ಗೊತ್ತೇ ಇರ್ಲಿಲ್ವಲ್ಲಾ? ಎಲಾ ನಿಮ್ಮಾ! ಛೆ, ಛೆ. ಛೇ. ಬೇಸರಪಟ್ಟುಕೋಬೇಡಿರಿ. ತಿಳಿಯದೆ ಹೇಳಿದೆ ಅಂದೆ.

೨. ಏನೂ ಪರವಾ ಇಲ್ಲ. ತಿಳಿಯದೆ ಇದ್ದಮೇಲೆ ಹೇಳಿದ್ದಕ್ಕೇಕೆ ಬೇಸರ ನನಗೆ? Honesty is the plainest and humblest manifestation of

Truth ಆದ್ದರಿಂದ ನನ್ನ ಪಾಲಿಗೆ ಬಂತು— ವಿಷಯವನ್ನು ಹಿಡಿದು ಹೇಳಬೇಕಾದ ಘಜೀತಿ. ನಮ್ಮದು ತಿಳಿಯದವರಿಂದ ತುಂಬಿದ ದೇಶವಾದುದರಿಂದಲೇ "ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ" ಎಂದಿದೆ ಗೀತೆ. ಶ್ರೀ ಸಿದ್ದಪ್ಪನ ಹಳ್ಳಿಯ ಕೃಷ್ಣಶರ್ಮ ಮಹೋದಯರು ಆದರಿಂದಲೇ ಪ್ರಜಾರಾಜ್ಯ ದಿನೋತ್ಸವವನ್ನು ಜಾತ್ರೆಯನ್ನಾಗಿ ಆಚರಿಸಬೇಕೆಂದು ಆಗ್ರಹಿಸಿದ್ದು. ಏಕ ಮುಖಿತಾ ಸ್ವಭಾವದ ನಮ್ಮ ಜನಕ್ಕೆ ಅನೇಕ ಮುಖದ ರಾಜಕೀಯವನ್ನು ಕಂಡು ವಿಶ್ವರೂಪವನ್ನು ಕಂಡ ಅರ್ಜುನನಂತೆ ಗಾಬರಿಯಾಗಿ ಹೋಗಿದೆ. ವಿಗ್ರಹಭೇದಕ ನಾಗಿ ನಿಂತ ನಮ್ಮ ಪಕ್ಷವು ಎಲ್ಲ ಪಾರ್ಟಿಗಳನ್ನೂ ಬಹಿಷ್ಕರಿಸಬೇಕೆಂಬ ಕ್ರಾಂತಿಯ ಆಂದೋಲನವನ್ನೇ ಶುರುಮಾಡಿದೆ. ವ್ಯಕ್ತಿಯೂ ಒಂದು ಕುಟುಂಬದ ಪಾರ್ಟಿ ಯಾಗಿರುವುದರಿಂದ ಅವನಿಗೆ ಉಮೇದುವಾರನಾಗಲು ಅರ್ಹತೆಯಿಲ್ಲ. ಕುಟುಂ ಬಾತೀತರಷ್ಟೇ ಚುನಾವಣೆಗೆ ನಿಲ್ಲಲು ಅರ್ಹರಾಗಬೇಕು. ಅವರಿಗೆ ಅಪ್ರತ್ಯಕ್ಷ ಕುಟುಂಬಗಳೂ ಇರಬಾರದು; ಅಂದರೆ ೫೦ರಿಂದ ೭೫ರೊಳಗಿನ ಸಂನ್ಯಾಸಿಗಳಾ ಗಿರಬೇಕು. ಆನಂದಮಠದಲ್ಲಿ ಬಂಕಿಮರು ಯಾರನ್ನು ಸಂಘಟಿಸಿದರು ಸ್ವಾತಂತ್ರ್ಯಾಂದೋಲನಕ್ಕೆ? ಸಂನ್ಯಾಸಿಗಳನ್ನು – ಭಿಕ್ಷುಕ ಬೇವಕೂಫ ಕಫಿನೀಪತ ಯ್ಯಗಳನ್ನಲ್ಲ! ಗೀತೆ ಹೇಳಿದ ಸಂನ್ಯಾಸಿ ಆ ಪಂಗಡಕ್ಕೆ ಸೇರಿ ೧೫ ಲಕ್ಷ ತನ್ನ ಸಂಪತ್ತ ಯನ್ನು ಬೆಳಸಿಲ್ಲ. ಗಾಂಧಿಯವರು ಸಂನ್ಯಾಸಿಗಳು–ಗೀತಾಲಕ್ಷಣದಂತೆ. ಅವರು ಕೊಡಿಸಿದ ಸ್ವರಾಜ್ಯದ ಆಡಳಿತ ಅಂಥ ಪ್ರತಿನಿಧಿಗಳಿಂದ ಮಾತ್ರ ಉಳಿಯ ಬಲ್ಲುದು. ಇಷ್ಟುಸಲ ಸಂವಿಧಾನವನ್ನು ಬದಲಾಯಿಸಿದವರಿಗೆ ಈ ಬದಲಾವಣೆ ಗಾಗಿ ಬದಲಾಯಿಸಲು ಬರುವುದಿಲ್ಲವೇ? ಮನಸ್ಸಿದ್ದಲ್ಲಿ ಮಾರ್ಗವಿದೆ!

೧. ಜೋರಾಯಿತಲ್ಲ. ಸ್ವಾಮಿ, ನಿಮ್ಮ ಅವ್ಯವಹಾರ್ಯ ಯೋಜನೆಯ ಭಾಷಣ!

೨. ಸರಿ ವ್ಯವಹಾರ್ಯತೆಯ ಅಳಗೋಲನ್ನು ನಿಮ್ಮಂಥ ಜನರ ಕೈಗೊಪ್ಪಿ ಸಿದ ಅಜ್ಞಾನಪರ್ವತವನ್ನು ಕಡಿದೊಗೆಯಲೆಂದೇ ನಮ್ಮ ಪಕ್ಷವು ಕ್ರಾಂತಿ ಗಾರಂಭಿಸಿದೆ. ಹಾಗೆ ಒಪ್ಪಿಸಿಯೇ ಭಾರತೀಯರು ಕೆಟ್ಟರು: ಭಾರತ ಹಾಳಾಯ್ತು: ಬಡವರಿಗೆ ಗೋಳಾಯ್ತು. Vice is a false arithmetic, false philosophy of life! ನಿಪರುಗಳಿಂದ ಒಡೆದು ದೊಪರು ಹೊಡೆದು ಕೊಂಬ ಕೆಲ ಗೊಡ್ಡು ಆಚಾರ್ಯರುಗಳವರೆಗೂ ಇದೇ ಗಣಿತ!

ಬೆಂಗಳೂರಿನ ಉಪವನದ ಹಂಚಿ ಕೊಡುವಾಗ
ದಿಲ್ಲಿ ಪ್ಯಾರ್‌ಲೆಸ್ ಸಟ್ಟು ಕೊಳ್ಳುವಾಗ
ಬಂಡವಿಲ್ಲದ ಕಂಪೆನಿಗೆ ಸಾಲ ಕೊಡುವಾಗ

ಪರೀಕ್ಷೆ (Election) ನಿಧಿಯ ಸಂಗ್ರಹಿಸುವಾಗ
ಪುಡಿಯಾಳು ಲೋಫರರ ಹೊತ್ತುಕೊಂಡೊಯ್ದಾಗ
ಕೃಷ್ಣಮಾಚಾರಿಯನ್ನಾಯುವಾಗ
ಪೂರ್ಣದೇವಿಯು ಹಣದ ಟಪ್ಪಾಲು ತಿನುವಾಗ
ವಿಕ್ಟೋರಿಯಾಸ್ಪತ್ರೆ ಯಮನೆನಿಸುವಾಗ
ಯಾವ ಪಕ್ಷದ ಆಳ್ವಿಕೆಯಿತ್ತು ಹೇಳಿರಿ ಸ್ವಾಮಿ
ಆಹ. ಮರೆಯುತಿರೆ ಯೋಜನಾ ಸ್ವರ್ಗಭೋಗ !

ನಿಮಗೂ ಗೊತ್ತಿರಬೇಕಲ್ಲಾ – ನೀವೂ ಯೂನಿವರ್ಸಿಟಿಯ ಚುನಾವಣೆಗಳಿಗೆ ನಿಂತವರು. ನೀವು ಲಿಂಗಾಯತರಲ್ಲ. ಮಾಧ್ವರಲ್ಲ. ವಿಜಾಪುರದವರಲ್ಲ. ಹಳೆ ಬೆಂಗಳೂರುಮೈಸೂರಿನವರಲ್ಲ. ಹಿಂದುಳಿದವರಲ್ಲಿ, ಮತ್ತ್ಯಬ್ರಾಹ್ಮಣರಲ್ಲ. ಜತ್ತಿ–ನಿಜಲಿಂಗಪ್ಪನವರ ಗುಂಪಿನವರಲ್ಲ, ಇಂಗ್ಲಿಷ್ ಸ್ಕಾಲರಲ್ಲ. ರಾಜಧಾನಿ ವಾಸಿಗಳಲ್ಲ. ವಶೀಲಿ ಇಲ್ಲ–ಅದ್ದರಿಂದ ಜಯಲಕ್ಷ್ಮಿ ನಿಮಗೆ ಮಾಲೆ ಹಾಕಲಿಲ್ಲ ! ನಿಮ್ಮಂಥವರು ಬಹುಸಂಖ್ಯರಾಗಿರುವುದೇ ಅಪರಾಧ. ನಮ್ಮ ಸದ್ಯದ ಪ್ರಜಾಪ್ರಭುತ್ವದ ಭಾರತೀಯ ಪ್ರಯೋಗದಲ್ಲಿ. ಇಂಥಾ ಭಾವನಾ ಸಮಸ್ಯೆಯುಳ್ಳ ಜನ ನಿಮ್ಮಂಥವರಿಗೆ ಅದಿಲ್ಲವೆಂದು ಕಲಿಸಲು ಯೋಜನೆ ಹಾಕಲು ಆರಂಭಿಸಿದ್ದಾರೆ ದಿಲ್ಲಿಯಲ್ಲಿ ! ಇವರೇ ರಾಜಕೀಯ ಪಕ್ಷಗಳೆಂದರೆ – ಇವರಿಗೆ ರಾಜಕೀಯ ತತ್ವಜ್ಞಾನದಲ್ಲಿ ಶ್ರದ್ಧೆ ಇದೆ ಅಂತ ತಿಳಕೊಂಡಿರಾ? ಇಂಥ ಪಕ್ಷಗಳನ್ನು ಸಾಕುತ್ತ ಬಂದ ನೆಹರು ನಾಗರಿಕತೆ ಭಾರತವನ್ನು ಪರಾಜಯಮಾಡೀತು ! ಹೇಳಿದ್ದನ್ನು ಮಾಡದಿರುವನಾಗರಿಕತೆಗೆ ನೆಹರು ನಾಗರಿಕತೆ ಎಂಬುದನ್ವರ್ಥನಾಮ.

೩. ಏನ್ ಸ್ವಾಮೀ – ಅವರೊಬ್ಬರೇ ಸಿಕ್ಕಿದ್ದಾರೆ ನಿಮ್ಮಕೈಯಲ್ಲಿ ಅಂತ ದಬಾಯಿಸ್ತೀರಾ? ನನ್ನ ಪ್ರಶ್ನೆಗಳಿಗೆ ಸ್ವಲ್ಪ ಉತ್ತರವನ್ನು ಹೇಳಿ ನೋಡೋಣ:

೧. ತಾವು ಹೇಳಿದ ಪಕ್ಷಗಳನ್ನೂ ಜಾತಿಗಳನ್ನೂ ಬಿಟ್ಟರೆ ಇಂಡಿಯಾ ಎಲ್ಲಿದೆ?

೨. ಒಂದು ವೇಳೆ ಇದ್ದರೂ ಅವುಗಳ ಅಸ್ತಿತ್ವ ಇಂಡಿಯಾದ ಹೊರಗೆಲ್ಲಿ ಸಾಧ್ಯ ?

೩. ಬುದ್ಧಿವಂತಿಕೆ ಇಲ್ಲದೆ ಅವರು ಪ್ರಭಾವಿ ಸ್ಥಾನಮಾನಗಳಲ್ಲಿದ್ದಾರಾದರೂ ಹೇಗೆ?

೨. ಸಾವಧಾನ. ಸಾವಧಾನ. ತಮ್ಮ ಪ್ರಶ್ನೆಗಳಿಗೆ ಒಂದೊಂದಾಗಿ ಉತ್ತರ ಕೊಡುತ್ತೇನೆ:

೧. ತಮ್ಮ ೧ನೆಯ ಪ್ರಶ್ನೆಗೆ ೨ನೆಯದರಲ್ಲಿ ಉತ್ತರವಿದೆ.

೨. ಎರಡನೆಯುದು ಹೀಗೆ: ಅವು ಇಂಡಿಯದಲ್ಲಿಲ್ಲ. ಎಲ್ಲೂ ಇರಬಾರದು. ಎಲ್ಲಿದ್ದರೂ ಅವು ಇಂದಿನ ಕಾಹಾದಿ ಭಾವನೆ ತುಂಬಿರುವವರೆಗೆ ಮಾನವ ನಾಗರಿಕತೆಗೆ ಹಾವು-ಚೇಳುಗಳಿದ್ದ ಹಾಗೆ: ಅವುಗಳು ತಮ್ಮ ಸಂಘಕಾರ್ಯವನ್ನು ಬಿಟ್ಟೊಡನೆಯೇ ಇಲ್ಲವಾಗುವುವು. ಅವುಗಳ ಅನುಯಾಯಿಗಳೆಲ್ಲ ನನ್ನಂತೆ, ನಾನೇ ಆಗುವರು.

೩. ಅವಕ್ಕೆ ಬುದ್ಧಿವಂತಿಕೆ ಇರುವುದು ನಿಜ. ಆದರೆ ಅದಕ್ಕಿಂತ ಹೆಚ್ಚಾಗಿ ಇತರರ ಅಬುದ್ಧಿವಂತಿಕೆಯು ದುರುಪಯೋಗಕ್ಕೆ ಅದು ಬಳಕೆಯಾಗಿರುವುದು ದೇಶಕ್ಕೆ ತಗಲಿದ ಮಾರಿಬೇನೆ. ಅಂಥ ಬೇನೆಯ ಪರಿಹಾರಕ್ಕೆ ಎರಡೇ ಮಾರ್ಗಗಳು. (a) ನಮ್ಮ ಕ್ರಾಂತಿ ಅಂಥ ಪಕ್ಷ-ಜಾತಿಗಳನ್ನು ಕಾಯಿದೆಯಿಂದ ನಿಷಿದ್ಧಗೊಳಿಸಿ ಜನ ಎಲ್ಲೆಲ್ಲೂ ಖಂಡಿಸುವಂತೆ ಮಾಡುವುದು: (b) ಅದಾಗದೆ ಹೋದರೆ ಅವುಗಳಂತೆ ಇನ್ನೂ ಎಷ್ಟೋ ಹೊಸ ಹೊಸ ಪಕ್ಷ ಜಾತಿಗಳನ್ನು ಕಾಯಿದೆ ಮೂಲಕ ಮುನ್ನಡೆಕೊಟ್ಟು ಜಾತೀಯ ಪ್ರಜಾಪ್ರಭುತ್ವ ಪ್ರಾತಿನಿಧ್ಯವನ್ನು ಆಸೇತು ಹಿಮಾಚಲವಾಗಿ ರಚಿಸಿಬಿಡುವುದು: ಜಾತ್ಯುಪಜಾತಿಗಳ ಜಾತಿ ಸಂಖ್ಯಾನುಸಾರ ಅವುಗಳ ಪ್ರತಿನಿಧಿಗಳ ಸಂಖ್ಯೆ ಇರತಕ್ಕದ್ದು: ಮತದಾರ ಕ್ಷೇತ್ರಗಳ ವ್ಯಾಪ್ತಿಯೂ ಅದೇ ಜಾತೀಯ ಆಧಾರವನ್ನು ಅವಲಂಬಿಸತಕ್ಕದ್ದು. ಈ ಎರಡು ಮಾರ್ಗಗಳಲ್ಲಿ ಒಂದನ್ನು ಹಿಡಿಯದೆ ಭಾರತದ ಉದ್ಧಾರವಾಗದು. ಒಂದನೆಯ ಮಾರ್ಗವನ್ನು ನನ್ನ ಕ್ರಾಂತಿತಂತ್ರವಿಲ್ಲದೆ ಅನುಸರಿಸಹೋಗಿ ಕಾಂಗ್ರೆಸ್ಸು ಸೋತಿದೆ: ಎರಡನೆಯುದು ಯಾರ ಮೆಚ್ಚಿಗೆಗೂ ಗಣ್ಯವಾಗಿ ಪಾತ್ರವಾಗಿಲ್ಲ!

೧. ಅದೇನು ಸ್ವಾಮಿ ನಿಮ್ಮ ಕ್ರಾಂತಿತಂತ್ರ? ದಯವಿಟ್ಟು ವಿವರಿಸಿ ನೋಡೋಣ.

೨. ತಿರುಪತಿಗೆ ಕರೆದುಕೊಂಡು ಹೋಗಿ ತಲೆಬೋಳಿಸುವುದು. ಪಕ್ಷಾಂಧತೆ ಜಾತ್ಯಂಧತೆಗಳನ್ನು ವಾಕ್ಕಾರ್ಯಗಳಲ್ಲಿ ತೋರಿದವರಿಗೆ – ಅವರ ಅಧಿಕಾರ ಸ್ಥಾನ-ಮಾನಗಳನ್ನು ಖಾಯಂ ಆಗಿ ಲೋಪಿಸಿ! ಯಾರು? ನಮ್ಮಂಥವರು; ಅಧಿಕಾರವನ್ನು ಕಸಿದುಕೊಂಡು–ಇಸಿದುಕೊಂಡಲ್ಲ – ಇಸಿದುಕೊಳ್ಳಲು ಯುಗಾಂತರಗಳು ಬೇಕಾದಾವು ಇಂದಿನ ಚುನಾವಣಾ ಪದ್ಧತಿಯ ದುಸ್ತಂತ್ರದ ಪ್ರಕಾರ! ಕ್ರಾಂತಿ ಶಬ್ದದ ಅರ್ಥವನ್ನರಿಯದೆ ಭಾಷಣಮಾಡುತ್ತಿರುವ ನಮರು ಮಹಾ

ಶಯುರಿಗೊಂದು ಶಬ್ದಕೋಶವನ್ನು ಕೊಂಡುಕೊಡಿ. ಕಾಯುದೆ ಬಲವನ್ನು ಪಡೆಯಲಾಗದುದಕ್ಕೆ. ಪಡೆದು ಸುಧಾರಣೆ ಮಾಡಲಾಗದುದಕ್ಕೆ ಅವರಿಗೆ ಕ್ರಾಂತಿ ಪದದ ಅರ್ಥ ಗೊತ್ತಿಲ್ಲ, ಕ್ರಾಂತಿಮಾಡುವ ಧೈರ್ಯವಿಲ್ಲ, ಕ್ರಾಂತಿಧರ್ಮದ ಯೋಜನೆ ಮಾಡುವ ಮಿತ್ರಶಕ್ತಿಯಿಲ್ಲ. ಕಾಂಗ್ರೆಸ್ ಬಿಡಲು ಆತ್ಮಶುದ್ಧಿ ಇಲ್ಲ! ಕಾಂಗ್ರೆಸ್ ಶುದ್ಧಮಾಡಲು ರಾಜತಾಂತ್ರಿಕ ಯುಕ್ತಿಯಿಲ್ಲ!

೩. ಈ ಮಾತು ನಿಜ, ಸ್ವಾಮಿ, ನಿಜ. ದೇವರನ್ನು ನಂಬದಿರುವ ನೆಪರುಗಳದಿಂದು 'ದೇವರೇ ಗತಿ' ಎಂಬಂತಾಗಿದೆ: ಅವರಾಳಿಕೆಗೆ ಸಿಕ್ಕ ದೇಶಕ್ಕೂ ಅದೇ ಗತಿಯಾಗಿದೆ! ಇದೂ ಒಂದು ಮೋಜು: ದೇವರ ಯಾವ ಸ್ವರೂಪವನ್ನೂ ಲಕ್ಷಣವನ್ನೂ ಅಥವಾ ಚಿಹ್ನವನ್ನೂ ನಂಬೆನೆಂಬವರು ತಮಗೆ ಪ್ರಿಯವಾದ ಒಳ್ಳೆಯ ಅಥವಾ ಕೆಟ್ಟ ತತ್ವಗಳನ್ನೇ ದೇವರೆಂದು ನಂಬಿ ನಡೆಯುತ್ತಾರೆ; ದೇವರನ್ನು ನಂಬಿರುವೆವೆಂಬುವರು ಅವನ ಯಾವುದೋ ಒಂದು ನಿರರ್ಥಕ-ದುರರ್ಥಕ ರೂಪ ಅಥವಾ ನಾಮವನ್ನು ನಂಬಿ ಆತ್ಮವಂಚನೆ–ಪರವಂಚನೆಗಳಲ್ಲೊಂದನ್ನು ನಿತ್ಯವೂ ಮಾಡುತ್ತಿರುತ್ತಾರೆ. ತತ್ವಕ್ಕೆ ತಿಲಾಂಜಲಿಯಿತ್ತು ಬಾಯಲ್ಲಷ್ಟೇ ಹೇಳುತ್ತ! ಇದಕ್ಕೆ ನಿಮ್ಮ ಕ್ರಾಂತಿ ತಂತ್ರ ಏನೆನ್ನುತ್ತದೆ ಸ್ವಾಮಿ?

೨. ನಮ್ಮ ಕ್ರಾಂತಿ ತಂತ್ರವು ಹಿಟ್ಲರನ ಸಂಘಟನಾ ಕಲೆಯನ್ನು ಹಿಡಿಯುತ್ತದೆ. ಪುಸ್ತಕ ತರಿಸಿ ಓದಿಕೊಳ್ಳಿ.

There is no education to any pattern of nationalistic civilisation **without indoctrination**. Indoctrination— ತತ್ವಾವಾಪವಿಲ್ಲದೆ ಯಾವ ಕ್ರಾಂತಿಯೂ ಸಂಘಟಿತವಾಗದು. ತತ್ವಾವಾಪವೆಂಬುದು ಸ್ವಾತಂತ್ರ್ಯ-ಪ್ರಜಾಪ್ರಭುತ್ವಗಳಿಗೆ ವಿರುದ್ಧವೆಂಬವರಿಗೆ ವ್ಯವಹಾರಜ್ಞಾನವಿಲ್ಲ. ನಮ್ಮ ತತ್ವಜ್ಞಾನದ ಅದ್ವಿತೀಯ ಅದ್ವೈತ ಸಂಪತ್ತನ್ನು ರಾಜಕೀಯಕ್ಕೆ ಸಮನ್ವಯಿಸಿಕೊಂಡು ಭಾರತಾದ್ವೈತವನ್ನು ಜಪ, ತಪ, ಯಜ್ಞ, ಪ್ರಾರ್ಥನೆ, ಕಥೆ, ಉಪಾಸನೆಗಳನ್ನಾಗಿ ವ್ಯಾಪೀಕರಿಸಿ ಸರ್ವ ವ್ಯವಹಾರಗಳಲ್ಲೂ ಹಾಸುಹೊಕ್ಕಾಗುವಂತೆ ಸಂಕೇತಿಸಬೇಕು. ನಾನೀಗ ಈ ಮತಕ್ಕೆ ನಿಮ್ಮನ್ನು ಪರಿವರ್ತಿಸಲು ಬಂದಿದ್ದೇನೆ. ನೀವೀಗ ಪರಿವರ್ತಿತರಾಗಿದ್ದೀರಿ.

೪. ಎಲ್ಲರನ್ನೂ ಇಷ್ಟು ಹೊತ್ತಿನ ತನಕ ಲೇವಡಿ ಮಾಡ್ತಿದ್ರಲ್ಲ ಸ್ವಾಮಿ; ಲೇವಡಿ ಮಾಡೋದು ನಿಮಗೆ ಗೊತ್ತಿಗೆಯೇ? ಏನು ಮಳ್ಳು ಹರಿಯುತ್ತೀರಿ? ಹಲಬುತ್ತೀರಿ ಪ್ರೊಕಳೆ ಪಂಡಿತರೇ! ನನಗುತ್ತರ ಕೊಡಿ–ಕೊಡೋಕಾಗೊಲ್ಲ ನಿಮಗೆ. ವಿಶ್ವವೇ ಭಗವಂತನ ಲೀಲೆ. ಲೀಲೆಗೇನಾದರೂ ಕಾರ್ಯ ಕಾರಣ ತರ್ಕವಿದೆಯೆ? ಲೀಲೆಯೇ ಉದ್ದೇಶ. ಲೀಲೆಯೇ ಫಲ: ಲೀಲೆಯೇ ಕಾರಣ.

ಲೀಲೆಯೋ ಕಾರ್ಯ! ಅವನ ಲೀಲೆಯಲ್ಲಿ ನಿಮ್ಮದೂ ಒಂದು ಲೀಲೆ, ನನ್ನದೂ ಒಂದು ಲೀಲೆ. ನಾಯಕನಾಗಿ ಲೀಲಾಮಾಯೆಯದೂ ಒಂದು ಲೀಲೆ – ಅವನ ಲೀಲೆ ಎಂಬುದಲ್ಲವಾದರೆ ಅಂಧಪ್ರಕೃತಿಯ ಅಜ್ಞಾನ ಲೀಲೆ ಎನ್ನಿ – ಅಷ್ಟಗ್ರಹಗಳ ಲೀಲೆ ಎನ್ನಿ – ಬುದ್ಧಿವಂತರೆಂದುಕೊಂಬವರ ಬುದ್ಧಿಲೀಲೆ ಎನ್ನಿ. ವಿಶ್ವವಂತೂ ಒಂದು ವಿಕಟವಾದ ಸ್ವಪ್ನ.

ಸ್ವಪ್ನವಲ್ಲ ಈ ವಿಶ್ವ ಇದೋ ವಿಕಟಸ್ವಪ್ನ ನಶ್ವರಾತ್ಮ
ಪಶ್ವಾಜೀವ ಸಜೀವ ಕೋಟಿ ಪಶುನಿಂದೆಯೊ ಮತಿವೇಶ್ಮ
ಕಶ್ಮಲವನು ಹತ್ತವತಾರಗಳೂ ಗುಡಿಸದಾದ ಮೇಲೆ
ಕಶ್ಮಲವನ್ನೇ ಹಿಡಿದು ನಡೆವ ಮಲಪಾಥ ನಮ್ಮ ಲೀಲೆ
ಮಾನವಿಲ್ಲದವರೇತಕೆ ಮಾನದ ಮಾತನಾಡಬೇಕು?
ಮಾನವಿಲ್ಲ ವಿಶ್ವಕ್ಕೆ ಎಲ್ಲವನು ಗರ್ಭೀಕರಿಸಿರಲು!
ಮಾನವ ಮಾನಾಭಾಸ ಮಾನ-ಮರ್ಯಾದೆಗಾದ ದಾಸ
ಜ್ಞಾನದ ಹೆಸರಲಿ ಏನೇನನ್ನೋ ಮಾಡಿ ಹೋದ ಮೋಸ!

---



# ಭಾರತದ ವರ್ಣಗಳು

'ವಿ' ಅಫ್ಘಾನ್ 'ಇಂಡಿಯನ್ಸ್'ಇಂದು ಅರಾಜಕರಾಗಿದ್ದಾರೆ ಬಸ್ತಾರಾಢ ಪತ್ರದಲ್ಲಿದ್ದವರಂತೆ. ಏಕೆ? ಈ ಅಲ್ಪರಾದ ಮಹಾಸಂಸ್ಥರು Anarchy is the sure consequence of tyranny though it is socialism in action ಕಾರ್ಯಗತವಾಗಲು ಬಯಸುತ್ತಿರುವ ಸಮಾಜವಾದವಾದರೂ. ಅರಾಜಕತೆ ಯೆಂಬುದು ಶಾಸನದ ಪರಿಣಾಮವೆಂದು ಬಗೆಯಲಾರಂಭಿಸಿದ್ದಾರೆ. ಇವರದು ಶೇಷಭೋಜನ. ಉಳಿದವರುಂಡು ಬಿಟ್ಟಿದ್ದನ್ನುಂಬ ತಿಪ್ಪರಿವರು. ಬೀಗಕಾದ ಭಾರತೀಯರೋ? ಅದೊಂದು ಬಗೆಯ ಅಪ್ರಾಚೀನತಾವಾದಿಗಳು. ಯೇನ ಕೇನ ಪ್ರಕಾರ ಭೋಗಗಳಲ್ಲ: ಎಲ್ಲರೂ ಬಿಟ್ಟುಕೊಟ್ಟ ಮಾಹಿತೋತ್ಪಾದನಗಳನ್ನವರುಣ್ಣರು. ಇವರದು ಧನಸಂಪತ್ತು. ಇವರು ಅತ್ಯಮಾಹಿತೋತ್ಪಾದಕರು. ಹೀಯೆಂಬ ಹಿಂದುವ್ರೊ? ರಾಷ್ಟ್ರದ ಭಾರವನ್ನೇ ಹೊತ್ತ ಧೃತರಾಷ್ಟ್ರ; ಅಪ್ಪನಾದ ವ್ಯಾಸ ಹೋದ ಬಳಿಕ ಈ ಜನಕ್ಕೆ ಕಣ್ಣೇ ಹೊರಟು ಹೋಯಿತ್ತು. ಡೀಸೋ? Dilute Christian. ಜೀಯ ಅನುಯಾಯಿ. ಬರಟು ಬಿಳಿ ಬಟ್ಟೆಯವ. ಇವನೇ ಡಿಲ್ಲಿ ಠಡಿಮೋಡಿನ ಮಾಲಿಕ: ರಾಜನಿಲ್ಲದ ರಾಜ್ಯಗಳ ನಿರ್ಮಾಪಕ: ಅವರೆ ಪಂಚವಾರ್ಷಿಕ ಬಸ್ತಾರರನ್ನು ನಿರ್ಮಿಸಿದ್ದು ಈತನೇ! ನಮ್ಮ ನಾಗರಿಕತೆಯನ್ನು ಎರಡೇ ಅಕ್ಷರಗಳಲ್ಲಿ ವರ್ಣಿಸಬೇಕಾದರೆ 'ಸೀಡಿ' Cumulative Deposit ಎನ್ನಬೇಕು! 'ಈ' ಮುಂತಾದ ವರ್ಗೀಯರರು ಸುಲಭಗ್ರಾಹ್ಯರು. ಆದರೂ ಸರ್ವಜ್ಞನೆಂದ ಗೊತ್ತೆ?

ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ?
ಜಾತಿಯು ಏಕೆ ಇರುವನಕ ಹೀನವೇ!
ಮಾತಾಡು ಬಂದು ಸರ್ವಜ್ಞ!

ಜಾತಿಯ ಉತ್ತಮನ ಕಣ್ಣು ಬೆಳಕೊ ಕೂಡ
ಪಾತಾಳದಂಧತಮ: ಪಾಪಿವರ್ಗಕ್ಕೆ
ಜಾತಿಯುಂಟೆಲ್ಲಿ? ಸರ್ವಜ್ಞ!

ಪಾಪ ಧರ್ಮಕ್ಕೆಂದು ತೋಂಡ ಸಾಕ್ಷಿಯ ಕೊಡಗು:
ವ್ಯಾಪಾರಿ ಬುದ್ಧಿ ಸರ್ವಾಂಗಗಳ ತುಂಬಿ
ನೀ ಕೈಲು ಧರ್ಮ-ಸರ್ವಜ್ಞ!

ಏಬಿಸೀಡಿಗಳನ್ನು ಜಪ್ಪುರುವ ಹೊಡೆದವರ.
ಜಾಬು ಹಂಟರರ. ಜಂಘದಂಭಾತ್ಮಕರ
ಬಾಬತ್ತು ಗೊತ್ತೆ? ಸರ್ವಜ್ಞ !

ಸರ್ವಜ್ಞನಿಗೆ ಮೊದಲೇ ಗೊತ್ತಿಲ್ಲ: ನಿನಗೆ ಕಡೆಗೆ ಗೊತ್ತಿಲ್ಲ !

"ಪ್ರೊ. ಬೇಂದ್ರೆ. ಕವಿ ಬೇಂದ್ರೆ. ಶ್ರೀ ಬೇಂದ್ರೆ ಮತ್ತು ಅನುಭಾವಿ (=ಯೋಗಿ) ಬೇಂದ್ರೆ ಎಂಬಿವರು ಬೇರೆ ಬೇರೆ" ಎಂದು. ಇದೇ ಸ್ವತಂತ್ರ ಭಾರತದ ನಾಗರಿಕತೆಯ ಬೀಜಮಂತ್ರವಾಗಬಲ್ಲ ಮನಃಶಾಸ್ತ್ರ ತತ್ತ್ವ. ಇದನ್ನು ಬೇಂದ್ರೆಯವರೇ ಸ್ವತಃ ಆಡಿದ್ದರಲ್ಲದೆ. ಆಚರಿಸಿದ್ದಿಲ್ಲ !

ಯಾರೋ "ಏ. ಜಡ್. ಖಾನ್"ಅಂತ ಒಬ್ಬರು ಹಿಂದೆ ಇದ್ದರಂತೆ. ಅವರ ಬಗ್ಗೆ ಏಜೆಡ್(Aged) ಆದ ಇನ್ನೊಬ್ಬರೆನ್ನುತ್ತಿದ್ದರು: 'ಏ' ಇಂದ 'ಜಡ್' ಎಂಬವರೆಗಿನ ೨೬ ಸ್ವರೂಪಗಳು ಅವರಿಗಿದ್ದವು – ಎಂದು.

ಸ್ವತಂತ್ರ ಭಾರತದ ಸಂಸ್ಥಾನಾಯಕರಲ್ಲನೇಕರು ಇಂದು 'ಏಜೆಡ್' ಏ. ಜಡ್. ಖಾನರೇ ಆಗಿರುವುದು ಸ್ಪಷ್ಟವಾಗಿದೆ. ನೀವು ಅವರಿಂದ ವೇದಾಂತವನ್ನಲ್ಲದೆ ಇನ್ನೇನನ್ನೂ ನಿರೀಕ್ಷಿಸಲಾರಿರಿ. ಅವರು ರಾಜಕೀಯವನ್ನೆತ್ತಲಿ, ಆರ್ಥಿಕವನ್ನು ಹೇಳಲಿ. ಸಾಹಿತ್ಯವನ್ನು ಕುರಿತು ಉದ್ಗರಿಸಲಿ – ಏನು ಮಾಡಿದರೂ ವೇದಾಂತ ಅವರ ಬೆನ್ನ ಬಿಡದು !

ಈ ವೇದಾಂತದ ಹಿನ್ನೆಲೆಯಾಗಿರುವ ಖಾನ್ ಪದದ ಅರ್ಥವಾದರೂ 'ಏ' ಇಂದ 'ಜಡ್' ಎಂಬಲ್ಲಿಯವರೆಗಿದೆ. "ಖಾನೇವಾಲಾ ಖಾನ್" ಎಂಬ ಅನ್ವರ್ಥದಲ್ಲಲ್ಲದೆ ಅಂಕಿತದಲ್ಲಿ ಅದರ ಅರ್ಥವಿಲ್ಲ. ಏನನ್ನು ಎಲ್ಲರೂ ತಿನ್ನುತ್ತಾರೆ? ಧನಕನಕ ವಸ್ತುವಾಹನಾದಿ ಭೋಗಸಾಧನಗಳನ್ನು ! ಭೋಗಿ ಎಂದರೆ ಸರ್ಪವೆಂತಲೂ ಅರ್ಥವಿದೆ. ಆದುದರಿಂದ ನಮ್ಮ ದೇಶದ ಯಜಮಾನರಲ್ಲಿ ಬಹುಸಂಖ್ಯಾಕರು ನಾಗಾಲ್ಯಾಂಡಿನ ಪ್ರಜೆಗಳೇ ಆಗಿದ್ದಾರೆ. ಅನ್ವರ್ಥದಲ್ಲಿ. ನಮ್ಮ ರಾಜಧಾನಿ ಹಸ್ತಿನಾವತಿ. ಹಸ್ತಿಯೂ ನಾಗದ ಒಂದು ರೂಪ: ಸೊಂಡಿಲಿರುವುದರಿಂದ ಆನೆಯೂ ನಾಗವೆನಿಸಿದೆ. ಆದುದರಿಂದ ಹಸ್ತಿನಾವತಿ (ಇಂದ್ರಪ್ರಸ್ಥ-ದಿಲ್ಲಿ)ಯು ಮೂಲಾಧಾರದಿಂದ ಹೊರಟ ವಾಯುವು ಕನ್ಯಾಕುಮಾರಿಯ ಸಹಸ್ರಾರದವರೆಗೆ ೨೬ ವರ್ಗದವರನ್ನು ನಿರ್ಮಿಸಿ ಅವರಲ್ಲಿ ೨೬ ರೂಪಗಳ ಭೋಗಮಾರ್ಗಗಳನ್ನು ನಿರ್ಮಿಸಿದೆ. ಆ ೨೬ ವರ್ಗಗಳಾವುವೆಂದರೆ:—

೧. Aesthetically honourable – ಶಿಷ್ಟಮಾನ್ಯರು.

೨. Backwardly honourable – ಹಿಂದುಳಿದವರು (ದಡ್ಡರು).

೩. Chronologically honourable - ವಯೋವೃದ್ಧರು.
೪. Despicably honourable – ಗೂಂಡರು.
೫. Effeminately honourable – ಅಧೀರ ಯುಕ್ತಿಸಂಪನ್ನರು.
(ನರಿನರರು)
೬. Fearfully honourable – ಪೋಲೀಸರು.
೭. Gorgeously honourable – ಉಡುಪು ಸೊಗಸುಗಾರರು.
(ಜೆಂಟ್ಲಮನ್ ಡಾಕುಗಳು)
೮. Hircinely honourable – ವಾಡೀವಾಲರು.
೯. Illusively honourable – ಲಂಚಕೋರರು.
೧೦. Joculary honourable – ಹುಚ್ಚರು.
೧೧. Kismetically honourable – ಕಳ್ಳಪೇಟೆ ಸಾಹುಕಾರರು.
೧೨. Libidinously honourable – ಬೀದಿ ಕಾಮಣ್ಣರು.
೧೩. Mechanically honourable – ಪರದಕ್ಷಿಣಾಪ್ರಿಯ
ಅವಿವಾಹಿತ ಎಂಜಿನಿಯರ್.
೧೪. Nauseously honourable – ಜಂಘ ಕೊಚ್ಚುವವರು.
೧೫. Officially honourable – ದುಷ್ಟ ಅಧಿಕಾರಿಗಳು.
೧೬. Proverbially honourable – ಅಜ್ಜಿಯರು.
೧೭. Quotatively honourable – ಸ್ಕಾಲರರು-(ಪಂಡಿತರು)
೧೮. Racially honourable – ಬಿಳಿಯರು.
೧೯. Shabbily honourable – ಹೊಲಸು ಜೊತೆ ಪ್ರವಾಸಿ.
೨೦. Theatrically honourable – ಮುಖಸ್ತುತಿ ಪ್ರಿಯರು.
೨೧. Unisonously honourable – ಪಾರ್ಟಿದಾಸ ಎಮ್ಮೆಲ್ಲೆಗಳು.
(ಎತ್ತುಗೈವೀರರು)
೨೨. Vampirically honourable – ಅಧಿಕಾರಾಂಧ ಅಧಿಪತಿಗಳು.
೨೩. Wantonly honourable – ಕುಬೇರ ಪುತ್ರಿಯರು.
೨೪. Xylocarpously honourable – ನಿರ್ಲಜ್ಜ ಅನಿವಾರ್ಯರು.
೨೫. Yearly honourable – ವ್ಯಾಪಾರ ಚಿತ್ರಗಳು.
೨೬. Zoologically honourable – ಚಿಲ್ಲರೆ ಬುದ್ಧಿಯುವರು.

ಈ ೨೬ ವರ್ಗಗಳನ್ನು ಬಾದೀ ದಿಲ್ಲಿಸಲ್ಲಿ ತಯಾರಿಸಲಾಯ್ತು. ಈಗ ಚೀನ. ಪಾಕಿಸ್ತಾನ. ಗೋವೆ. ಕಾಂಗೋ. ಲಾವೋಸ್. ನೇಪಾಳ ಮತ್ತು ನಾಗಾ

ಲ್ಯಾಂಡುಗಳ ಜೊತೆಗೆ ಜಬ್ಬಲ್ಪುರದ ರಣರಂಗ ಸಮ್ಮ ಖಾದೀ ವೇದದ ಶ್ರೋತ್ರಿಯರೆದುರು !

"ಏನೇ ಬರಲಿ. ಸ್ಟೇಟ್‌ಮೆಂಟಿರಲಿ" ಎಂದು. 'ನೀತಿ ಪ್ರಿಂಟು'. 'ಬಿಳಿ ಕಾಗದ'. ಪ್ರತಿಭಟನಾಪತ್ರ. ಸ್ನೇಹ. ಶಾಂತಿ. ಸಹಜೀವನಗಳ ಮಂತ್ರಪಠನ-ಇಷ್ಟನ್ನು ನಿತ್ಯವೂ ಮಾಡುತ್ತಿದ್ದರೆ. ದೇಶಪ್ರೇಮದ ಗೌರೀಶಂಕರವನ್ನೂ ವಿವೇಕದ ಕನ್ಯಾಕುಮಾರಿಯನ್ನೂ ಗೆದ್ದಂತಾಗುತ್ತದೆ ! ಅಲ್ಲವೇನಯ್ಯಾ ?

ಸೂತ ಉವಾಚ—

ಅಯ್ಯಾ. ಭೂತಪ್ಪಾ-ಎಲ್ಲಿಂದ ಮಾತಾಡುತ್ತಿರುವೆ? ನಿನಗೆ ಕಣ್ಣೇ ಕಾಣುವುದಿಲ್ಲವೆ? ಪ್ರತಿ ಶಿಕ್ಷಣಸಂಸ್ಥೆಯ ವಾರ್ಷಿಕೋತ್ಸವದಲ್ಲೂ ಭಾರತ ದಾದ್ಯಂತ ಅಮೃತವಾಣೀ ಯಜ್ಞವನ್ನು ನೆರವೇರಿಸುತ್ತಿರುವುದು ಸಾಲದೇ? ಡಿಸೆಂಬರಿಂದ ಫೆಬ್ರುವರಿ ಕೊನೆಯವರೆಗೆ (ಒಂದೇ. ಎರಡೇ ?) ಬಾಲಕ-ಪಾಲಕ-ಮಾಲಕ (Manager) ಮತ್ತು ಶಿಕ್ಷಕರ ಸ್ನೇಹಸಮ್ಮೇಳನಗಳು ನಡೆಯುವುದನ್ನು ನೋಡಿಲ್ಲವೆ? ಅವುಗಳಲ್ಲಿ ಖಾದಿವಾದಿ ವಾಗ್ಝರಿಯು ರಾಜಕಾರಣ-ವೇದಾಂತಕಾರಣಗಳಿಂದ ಹಿಡಿದು ಮೋದಕಕಾರಣವಾದ ಫಲಾಹಾರ ಕಾರಣದ ವರೆಗಿನ ಸರ್ವಶಾಸ್ತ್ರಗಳ ಮೇಲಿನ ಸದುಪದೇಶಗಳನ್ನೂ. ಕಾಕ-ಭೇಕ-ಬಕ-ಘೂಕ-ಪ್ರೋಕ ಉದ್ದೇಶಗಳನ್ನೊಳಗಿಟ್ಟುಕೊಂಡು ಜಿಹ್ವಾಶ್ರಮದಾನಯಜ್ಞವನ್ನೂ ಈ ೧೩ ವರ್ಷಗಳಿಂದಲೂ ಮಾಡುತ್ತ ಬಂದಿಲ್ಲವೆ? ಅದರಿಂದ ಭಾರತದ. ಮೈಸೂರ ಕರ್ನಾಟಕದ ಮತ್ತು ಇತರ ದೇಶಗಳ ಸಮಸ್ಯೆಗಳೆಲ್ಲವಕ್ಕೂ ಸಮುತ್ತರಗಳನ್ನು ಕೊಟ್ಟಂತಾಗಿಲ್ಲವೆ? ಮಾತೇ ಮಾತೆ: ಮಾತೃಪ್ರಧಾನ ಸಂಸ್ಕೃತಿಯ ಸ್ವಭಾವವೇ ಭಾವ.

ತುಲಾಧಾರ (ವ್ಯಾಪಾರಿ) ಉವಾಚ—ಲಾಭವು ಲೋಭವೆ?

ದಂಡಧಾರ (ಅಧಿಕಾರಿ) ಉವಾಚ—ಲಂಚವು ಲಂಚಗಲ್ಲವೆ?

ಉಪನೇತ್ರಧಾರ (ಉಪಾಧ್ಯಕ್ಷ) ಉವಾಚ— ಉಂಡಾದಮೇಲೆ ಉಳಿದವರ ಚಿಂತೆ ಇರಬೇಕೆ?

ಉಪಸೂತ್ರಧಾರ (ಮರಿ ಮುಖಂಡ) ಉವಾಚ—ದೊಡ್ಡವರು ಹೇಳಿದ್ದಕ್ಕೆ ದುಡ್ಡಿನ ಅರ್ಥವಿಲ್ಲವೆ?

ಭಾಕ್ರಾದಲ್ಲಿ ೫೦ ಲಕ್ಷ ನುಂಗಲು ಸಾಧ್ಯವಾದರೆ. ದಾಮೋದರದಲ್ಲಿ ೩೦ ಲಕ್ಷವನ್ನಾದರೂ ನುಂಗಲು ಸಾಧ್ಯವಿಲ್ಲವೆ? ಪೊಂಗಲ್ ಭಾತ್ ಅಂತ ಬೆಂಗಳೂರಿನಲ್ಲಿ ಮಾಡಿದ ಹಾಗೆ ನುಂಗಲ್ ಭಾತ್ ಅನ್ನೋದನ್ನ ಮಾಡಿ ತಿನ್ನುವುದೇ ಸ್ವತಂತ್ರ ಭಾರತದಲ್ಲಿ ಬದುಕಿದ್ದಕ್ಕೆ ಸಾರ್ಥಕ. ದೇವರ ಹೆಸರಿನಲ್ಲಿ ಆಚರಿಸುವ

ನಾಸ್ತಿಕತೆಯುನಮ್ಮ ಪ್ರಜಾಕೋಟಿಯು ಕೆಲ ರಾಜರ ಧರ್ಮವಾಗಿರುವ ಸಂದರ್ಭವನ್ನು ಕಂಡೇ ದಾಸರು—

"ನೀ ಮಾಯೆಯೊಳಗೊ? ನಿನ್ನೊಳು ಮಾಯೆಯೋ?" ಎಂದು ಮಾಯಾಮಾಳವಗೌಳದಲ್ಲಿ ಹಾಡಿದ್ದು. ದೈವಶಾಪ ಕೊಡದೆ ಮನುಷ್ಯಮಂಡಲೇಶ ಪಾಪ ಮಾಡುತ್ತಾನೆಯೆ? ಶಿವಮೂರ್ತಿ (ಸಾಹಿತ್ಯ ಪರಿಷದಧ್ಯಕ್ಷರ ಕುಕ್ಷಿ) ಕೃಷ್ಣರಾಯ (ಪರಿಷತ್ತಿನ ಅಧ್ಯಕ್ಷರ ತಲೆ) ರಲ್ಲಿ ಅಗ್ನ್ಯಸ್ತ್ರ-ವರುಣಾಸ್ತ್ರಗಳ ವಿನಿಮಯವಾಗುತ್ತಿತ್ತೇ? – ಅಲ್ಲದೆಹೋದರೆ! ಕರ್ಮವೀರರೆಲ್ಲಾ ಮತಧರ್ಮವೀರರಾದರು ಏಕೆ ಮತ್ತೆ? Mr. Bhootappa, please tell me. It is not a sign of cultural and literary development? ಸೆನ್ಸು ಮತ್ತು ನಾನ್ಸೆನ್ಸುಗಳ ಎಕ್ಸ್‌ಚೇಂಜ್ ವ್ಯಾಲ್ಯೂ ಆದರೂ ನಿನಗೆ ಗೊತ್ತಾಗಬೇಡವೇ?

Exchange is a change that always gives you a novelty. Novelty is beauty! ಗೊತ್ತಾಗಲಿಲ್ವೇ? ಹಳ್ಳಿಹಳ್ಳಿಗಳಿಗೂ ಇನ್ನು ರೋಟರಿ ಕ್ಲಬ್ಬುಗಳು ಬರುತ್ತವೆ ರೋಟರಿ ಕ್ಲಬ್ಬುಗಳೆಂದರೆ ರೊಕ್ಕಸ್ಥರ ಸಂಘ: ದುಡ್ಡಿದ್ದವನಷ್ಟೇ ಸರ್ವಗುಣ ಸಂಪನ್ನ: ಆದುದರಿಂದ ಭಯಭಕ್ತಿಗರ್ಹ ಎಂದು ಪ್ರಚಾರಮಾಡಿ ಆಚರಿಸುವ ಅಮಲ್ದಾರಿ ಸೂತ್ರ: Night Club ರಾತ್ರಿ ಕ್ರೀಡಾ ಸಂಘ ಮುಂತಾದವುಗಳನ್ನು ಪಡೆಯುವ ರಾಣಿ ಜೇನದು! ಮಧ್ಯ ಯುಗೀನ ಜಮೀನುದಾರಿ–ಪಾಳೆಯಗಾರಿಕೆಯ ಸಾಹುಕಾರ ಸರದಾರಿಕೆಯನ್ನು ಪುನರುದ್ಧಾರಗೊಳಿಸಲು ಕಾಯದೆ ಪೋಲೀಸರಿಂದ ಆತಂಕ ಬರದಂತೆ ಪ್ರಚುರಪಡಿಸಲು ಹೊರಟ ಅಮೇರಿಕದ ಗುಪ್ತಗಾಮಿನಿಗಳಾದ ಈ ಕಾರ್ಟೆಲ್ (Cartel) ಧ್ಯೇಯಗ್ರಸ್ತರ ಬಳಗಕ್ಕೆ ಬಡಪಾಯಿಗಳೂ ಪೋಕಿ ಲಾಲಸೆಯಿಂದ ಸೇರುತ್ತಿರುವ ದೃಶ್ಯವೇನು ಅಪ್ರಗತಿಶೀಲವೇ?

ರೋಟರೀ ತೀರ್ಥಮಾದಾಯ
ಪಿಬನ್ ನೇತ್ರೇ ಸ್ಪೃಶನ್ ನರಃ ।
ಅವಮಧ್ಯಮ ವರ್ಗೀಯೋ
ಗುರುತ್ವೇ ಹಿಮವಾನ್ ಭವೇತ್ ॥

ಭೂತ ಉವಾಚ—

ಅಹುದು ಮಹಾರಾಯಾ. ನೀನು ಹೇಳಿದ್ದು ಸರಿಯೋ ಸೂತಪ್ಪಾ! ನಾನು ಹೇಳಿದ್ದೂ ಸರಿಯೋ ಸೂತಪ್ಪಾ! ನಾನು ಭೂತಕಾಲದ ಭೂತ: ನೀನೋ? ವರ್ತಮಾನಕಾಲದ ಭೂತ. ಅಂದಮೇಲೆ ನನ್ನ ಮುಂದೆ ನೀನು. ನನ್ನ ಕತ್ತಿನ

ಮೇಲ್ ಕೂತ್ಕೊಂಡು ನೀನು ಸವಾರಿ ಮಾಡ್ತೀಯಾ. ಆದರೆ ನೋಡು–ಬ್ಯಾಟಿಗೆ ಒಂದು ಟ್ರೂತ್ (ಸತ್ವ) ಬೇಕಾಗುತ್ತೆ. ಅದಿಲ್ಲದೆಹೋದರೆ ಅದೆಲ್ಲಾ ಸೊನ್ನೆ Hollow! ಆ ಸತ್ವವ್ರೋ? ವರ್ತಮಾನವೆಂದು ತಿಳಿದ ಭೂತವಾಗಿರುತ್ತೆ. ಒಂದು ನಾಡಿನ ಭೂತಗಳ ಜಾಲವೇ ಹಾಗಿದೆ. ಚರಿತ್ರೆಯಂತೂ ಭೂತವೇ—ವರ್ತಮಾನದ್ದು ಕೂಡ!

ನೋಡಪ್ಪಾ. ಒಂದ್ ಮಾತು: ಸತ್‌ಮೇಲೆ ಎಲ್ಲರೂ ಭೂತ (Past) ಆಗೋದು ಎಲ್ಲರಿಗೂ ಗೊತ್ತು. ಜೀವಿಸಿದ್ದಾಗಲೇ ಭೂತವಾಗೋ 'ನಾವೆಲ್ಲ' ಗೊತ್ತೇನಯ್ಯಾ ನಿನಗೆ? ನಿನ್ನ ರೋಟೇರಿಯಾನಿಜಂ ಅಂಥ ಮದ್ದು. ಆಜಾದ್ ಕಾಶ್ಮೀರ ಅಂಥ ಮದ್ದುಂಡವರ ಕಾರ್ಯಾಭಾವದ ಫಲ. ಶ್ರೀ ಪಿ. ಸೀತಾರಾಮಯ್ಯ ಏನು ಹೇಳಿದರು ರಾಯಚೂರಿನಲ್ಲಿ? "ನಮ್ಮಲ್ಲಿ ಸಾರ್ವಜನಿಕ ಸದ್ಗುಣ ಬೆಳೆದಿಲ್ಲ: ಬೆಳೆಸಲು ನಮಗೆ ಅವಕಾಶವಿಲ್ಲ!" ಸ್ವತಂತ್ರ ಭಾರತದ ಆಧುನಿಕ ವಿಜ್ಞಾನಯುಗದ ಸರ್ವಸಮಾನಾವಕಾಶ ಇರೋದು ಯಾತಕ್ಕೆ? ದುರ್ಗುಣ ಬೆಳೆಸಿಕೊಳ್ಳೋಕೆ: ಸದ್ಗುಣ ಬೆಳೆಸಲು ಅವಕಾಶ ಕಳಕೊಳ್ಳೋಕೆ! ಹಾದಿಗೆ ಬಾರಯ್ಯಾ. ಭೂತಸಂದಕನೇ. ನಿನ್ನ ಹೃದಯ ಅನ್ನೋದು ಫ್ಯೂಡಲಿಜಂನಲ್ಲಿದೆ: ಬುದ್ಧಿ ಸದ್ಯಕ್ಕೆ ಸೋಷಲಿಸ್ಟಿಕ್ ಮಾತಾಡುತ್ತಿದೆ: ಕೈಕಾಲುಗಳು ಹೃದಯ ಹೇಳಿದ್ದನ್ನೇ ಪ್ರತ್ಯಕ್ಷವಾಗಿ ಮಾಡುತ್ತಿವೆ. ಈ ಅಹೋರಾತ್ರ ರಾವಣ ಭಜನದಲ್ಲಿ ಕುಂಭಕರ್ಣ ನಿದ್ದೆ ಹೊಡೆಯುತ್ತಾನೆ. ವಿಭೀಷಣ ಪರರಾಜ ಹಸ್ತಕನಾಗುತ್ತಾನೆ. ಶೂರ್ಪಣಖಿ ಚಾಡಿ ಹೇಳುತ್ತಾಳೆ. ಮಂಡೋದರಿ ಮುಂಡೆ ಕಟ್ಟಿಕೊಳ್ಳುತ್ತಾಳೆ. ಸೀತೆ ಒಳಸಂಚು ಮಾಡುತ್ತಾಳೆ. ಹನುಮಂತ ಬರುತ್ತಾನೆ. ಲಂಕಾಪಟ್ಟಣ ಸುಟ್ಟು ಹೋಗುತ್ತದೆ. ರಾವಣ ಸೀತೆಯನ್ನು ಕದ್ದ ಕಳ್ಳನೆನಿಸಿ ಹತ್ತು ತಲೆಗಳನ್ನು ಕಳೆದುಕೊಳ್ಳುತ್ತಾನೆ! ಗೆದ್ದವನು ಇತಿಹಾಸ-ಪುರಾಣಕಾರರಿಂದ ಬೇಕಾದ್ದನ್ನು ಬರೆಯಿಸುತ್ತಾನೆ! ಇದೇ ನಾ ಹೇಳಿದ ಪರಿಸ್ಥಿತಿಗಳ ವರ್ಗೀಕರಣ. ವರ್ಗ ಗರ್ವವೇ ಮೃತ್ಯು. ಅದರಿಂದಲೇ ಭಾರತೀಯರು ಮರ್ತ್ಯರು. ಅವರ ಕೀರ್ತಿ ಮಾತ್ರ ಅಮರ! ಪಂಜಾಬೀ ಸುಭಾ ಜಿಂದಾಬಾದ್!

ಸಿದ್ದಪ್ಪನವಳಿ ಕೃಷ್ಣಶರ್ಮರು ಲಿಂಗಾಯತರು ಹಿಂದೂಗಳಲ್ಲವೆಂಬ ವಾದವನ್ನು ಖಂಡಿಸಲು ಎತ್ತಿದ್ದು ಜನಗಣತಿಯ ಮೂಲಕ ಜಾತಿ ವರ್ಗ ಭೇದವನ್ನು ಅಜರಾಮರಿಸಿದ ಪದ್ಧತಿಯನ್ನೇ ಕುರಿತು. ಮಂತ್ರಿಗಳ ಮಕ್ಕಳೆಲ್ಲಾ ಬೃಹಸ್ಪತ್ಯಾಚಾರ್ಯರೆಂದು ತಿಳಿದು ಅವರಿಗೇ ಹಿರಿಹುದ್ದೆಗಳನ್ನು ಸರಕಾರದಲ್ಲೂ ಸಾವಕಾರಿಯಲ್ಲೂ ಕೊಡುತ್ತಹೋಗುವ ವರ್ಗಸಂಸ್ಥಾಪನೆಯೂ ಅಂಥದೇ ಸೂತಪ್ಪಾ.

ವ್ಯಾಖ್ಯೆಯನ್ನು ಬಿಂಬಿಸುವವರು ಸ್ವೀಕರಿಸುವ ವ್ಯಾಖ್ಯೆಯ ವರ್ಗಗಳ ಪರಿಚಯ ನಿಮಗಿಲ್ಲ ಅಂತ ಕಾಣುತ್ತೆ. ಅದೊಂದು ತರದ ದ್ವೈಧವು (Dilemma) ಕಣಯ್ಯಾ—

೧. ಮದುವೆಯಾಗದೆ ಮುಕ್ತಿ ಬಿಡದು: ಮುಕ್ತಿಬಿಡದೆ ಮದುವೆಯಾಗದು.

೨. ದಾರಿದ್ರ್ಯವು ಪಾಪಕ್ಕೆ ಮೂಲ: ಪಾಪವು ದಾರಿದ್ರ್ಯಕ್ಕೆ ಕಾರಣ.

೩. ಜಾತಿಯು ಅಸ್ಪೃಶ್ಯಕ್ಕೆ ಹೇತು: ಅಸ್ಪೃಶ್ಯವು ಜಾತಿ ಹೇತು.

೪. ಸಮಾಜ ಸ್ವಾಸ್ಥ್ಯ ಉಂಟಾಗದೆ ವ್ಯಕ್ತಿ ಸ್ವಾಸ್ಥ್ಯ ಉಂಟಾಗದು; ವ್ಯಕ್ತಿ ಸ್ವಾಸ್ಥ್ಯ ಉಂಟಾಗದೆ ಸಮಾಜ ಅರೋಗವಾಗದು.

೫. ನಿಜವಾದ ಪ್ರಜಾಸತ್ತೆ ಸಿದ್ಧಿಸದೆ ಪ್ರಜೆಗಳೆಲ್ಲಾ ಸಂಸ್ಕೃತರಾಗರು: ಪ್ರಜೆಗಳೆಲ್ಲಾ ಸಂಸ್ಕೃತರಾಗದೆ ನಿಜವಾದ ಪ್ರಜಾಸತ್ತೆ ಸಂಭವಿಸದು.

೬. ಆಡಳಿತ ಸುಧಾರಿಸದೆ ಶಿಕ್ಷಣದಿಂದ ಶೀಲವಂತಿಕೆ ಬೆಳೆಯದು: ಶಿಕ್ಷಣವು ಶೀಲವನ್ನು ಬೆಳೆಯಿಸದೆ ಒಳ್ಳೆಯ ಅಧಿಕಾರಿಗಳು ಸಿಗರು.

೭. ಶ್ರೇಷ್ಠ ಕೃತಿಗಳಿಲ್ಲದಲ್ಲಿ ಶ್ರೇಷ್ಠ ವಿಮರ್ಶಕರು ಕಾಣಸಿಗರು: ಶ್ರೇಷ್ಠ ರಸಜ್ಞರಿಲ್ಲದಲ್ಲಿ ಶ್ರೇಷ್ಠ ಕೃತಿಗಳು ಬೆಳಕು ಕಾಣವು.

೮. ಅದಕ್ಷ ಸೂತನಿಂದ ರಥಿಕನ ಪ್ರಾಣಕ್ಕೆ ಸಂಚಕಾರ: ಅಸಮರ್ಥ ರಥಿಕನಿಂದ ಸೂತನ ಜೀವಕ್ಕೆ ಗಂಡಾಂತರ.

೯. ಹೆಂಡತಿ ಯೋಗ್ಯಳೆನಿಸದೆ ಗಂಡ ಯೋಗ್ಯನಾಗಲಾರ; ಗಂಡ ಯೋಗ್ಯನೆನಿಸಿಕೊಳ್ಳದೆ ಹೆಂಡತಿ ಯೋಗ್ಯಳಾಗಲಾರಳು.

೧೦. ಭೂತಕಾಲದ ಹಿರಿಯರು ಪಾಪಮಾಡದೆ ವರ್ತಮಾನಕಾಲದಲ್ಲಿ ಅವರ ಗೋತ್ರಜರು ಪಾಪಶೀಲರಾಗಲಾರರು: ವರ್ತಮಾನ ಜನರು ಪೂರ್ವ ಜನ್ಮದಲ್ಲಿ ಪಾಪ ಮಾಡಿರುವುದರಿಂದಲೇ ಅಂಥ ಪಾಪಿಗಳ ಗೋತ್ರದಲ್ಲಿ ಹುಟ್ಟಿದ್ದಾರೆ.

೧೧. ಭೂತ ಉಪಾಜಕ್ಕೆ ಸೂತ ಉಪಾಜ: ಸೂತ ಉಪಾಜಕ್ಕೆ ಭೂತ ಉಪಾಜ!

೧೨. ಬಿಗುವಿಲ್ಲದಲ್ಲಿ ನಗುವಿಗೆ ಮಾನವಿಲ್ಲ: ನಗುವಿಲ್ಲದಲ್ಲಿ ಬಿಗುವಿಗೆ ಮಾನವಿಲ್ಲ!

---

# "೫೦ ಪೈಸೆ ಮಾಲೆ"ಯ ಸಾಹಿತ್ಯಬಳಗ

[ಕಳೆದ ಸಂಚಿಕೆಯಿಂದ]

ನಮ್ಮ ಪ್ರತಿ ಸಂಚಿಕೆಯಲ್ಲಿ ಸ್ಥಳಾವಕಾಶ ಸಿಕ್ಕಿದಷ್ಟು ಚಂದಾದಾರರ ಪಟ್ಟಿಯನ್ನು ಪ್ರಕಟಿಸಿ "ಸಾಹಿತ್ಯ ಬಳಗ"ದ ಪರಿಚಯ ಮಾಡಿಕೊಡುತ್ತಿದ್ದೇವೆ. ಅಂತೆಯೇ ಧನಸಹಾಯ ಇತ್ತವರ ಪಟ್ಟಿಯನ್ನೂ ಹಿಂದಿನಿಂದ ಪ್ರಕಟಿಸುತ್ತೇವೆ.

೮೭. ಸೋಲೊಮನ್ ಸೋನ್ಸ್. ಕುಂದಾಪುರ. ೮೮. ಬಿ. ಭುಜಂಗ ಭಂಡಾರಿ ಹೊಸನಗರ. ೮೯. ಕೆ. ರಾಮದಾಸ ಉಡುಪ. ಸಾಗರ. ೯೦. ಎಂ. ಎಸ್. ವ್ಯಾಸಗುರುರಾಜಾಚಾರ್ಯ. ಸಾಗರ. ೯೧. ಎಂ. ಶ್ರೀನಿವಾಸ ಭಟ್ಟ. ಸಾಗರ. ೯೨. ಶ್ರೀಮತಿ ರಮಣಿ ಶೆಣೈ. ಉಡುಪಿ. ೯೩. ಎಸ್. ಆರ್. ಬೀಡಿ ವರ್ಕ್ಸ್, ಉಡುಪಿ. ೯೪. ಯು. ಆರ್. ವಾಸು ಭಂಡಾರಿ. ಉಡುಪಿ. ೯೫. ಬಿ. ಕೆ. ಮುರಾರಿ ರಾವ್ ಉಡುಪಿ. ೯೬. ಜೆ. ಕೆ. ಬೇಕಲ್. ಉಡುಪಿ. ೯೭ ಯು. ಜೆ. ಬಂಗೇರ. ಉಡುಪಿ. ೯೮ ಟಿ. ಪುಂಡರೀಕಾಕ್ಷ ಆಚಾರ್ಯ ಉಡುಪಿ. ೯೯. ಲೂವಿಸ್ ಡಿ'ಸೋಜ. ಉಡುಪಿ. ೧೦೦ ಎಸ್. ಕುಮಾರಸ್ವಾಮಿ. ಉಡುಪಿ. ೧೦೧ ಎಚ್. ಬಿ. ತಿಮ್ಮ ಶೆಟ್ಟಿ. ಉಡುಪಿ. ೧೦೨. ಕೆ. ಮಾಧವ ಉಡುಪಿ. ೧೦೩. ಪಾ. ಚಂದ್ರಶೇಖರ ಚಡಗ. ಉಡುಪಿ. ೧೦೪. ಎ. ವೆಂಕಟ ರಮಣ ಉಪಾಧ್ಯ, ಉಡುಪಿ. ೧೦೫. ಪಾಂಡುರಂಗ ಭಂಡಾರಿ. ಉಡುಪಿ. ೧೦೬. ಬಾಬು ಭಂಡಾರಿ, ಸಾಗರ. ೧೦೭. ಡಾ। ಕೆ. ಮೋಹನ್‌ದಾಸ್. ಸಾಗರ. ೧೦೮. ಕೆ. ಸಂಜೀವರಾವ್.. ಸಾಗರ. ೧೦೯. ಬಿ. ವಿ. ಉಪಾಧ್ಯಾಯ. ಸಾಗರ. ೧೧೦. ಕೆ. ಜಗನ್ನಾಥ ಶೆಟ್ಟಿ. ಸಾಗರ. ೧೧೧. ಎಂ. ಎಚ್. ಎಸ್. ಕುಂಞಾಲಿ. ಸಾಗರ. ೧೧೨. ಶ್ರೀನಿವಾಸ ಉಡುಪ. [ಹೊಸನಗರ] ಸಾಗರ. ೧೧೩. ಟಿ. ಮಹಾಬಲೇಶ್ವರ ಭಟ್ಟ. ಸಾಗರ. ೧೧೪. ಕೆ. ನಾಗಪ್ಪಯ್ಯ. ಕಲ್ಯಾಣಪುರ. ೧೧೫. ಯು. ಎ. ರಾಮರಾವ್. ಉಡುಪಿ. ೧೧೬. ಎಲ್. ಬಿ. ಪುತ್ತೂರು. ಉಡುಪಿ. ೧೧೭. ರಾಮ ಜೋಗಿ. ಉಡುಪಿ. ೧೧೮. ಕೆ. ಡಿ. ಭಟ್ಟ. ಕುಂದಾಪುರ. ೧೧೯. ಎ. ಶ್ರೀನಿವಾಸ ರಾವ್. ಮಣಿ ಪಾಲ. ೧೨೦. ವಸಂತ ನಾಯಕ್. ಮಣಿಪಾಲ. ೧೨೧. ವಾಸುದೇವ ಕಿಣಿ. ಕಟಪಾಡಿ. ೧೨೨. ಸುಂದರ ಭಂಡಾರಿ. ಉಡುಪಿ. ೧೨೩. ಬಿ. ನಾರಾಯಣ ಸೇರಿಗಾರ, ಉಡುಪಿ. ೧೨೪. ಕೆ. ವಿ. ಪಿ. ಭಟ್ಟ. ಅದಿಉಡುಪಿ. ೧೨೫. ಟಿ. ಪ್ರಭಾಕರ ಪೈ. ಮಣಿಪಾಲ. ೧೨೬. ಬಿ. ಎನ್ ಶೆಟ್ಟಿ. ಬನ್ನಂಜೆ. ೧೨೭. ದಿ ಹೆಡ್‌ಮಾಸ್ಟರ್. ಎಸ್.ವಿ.ಎಸ್. ಹಾಯರ್ ಎಲಿಮೆಂಟರಿ ಶಾಲೆ, ಕಟಪಾಡಿ. ೧೨೮. ಎಸ್. ಡಿ. ವರದನಾಥ. ಮಣಿಪಾಲ. ೧೨೯. ಲಕ್ಷ್ಮೀ ಕ್ಲಾತ್ ಸ್ಟೋರ್ಸ್ ಉಡುಪಿ. ೧೩೦. ಟಿ. ಎ. ವಾಸುದೇವನ್. ಉಡುಪಿ. ೧೩೧. ಜೆರುರ್ ಮೋನ್. ಕೋಣಿ ಪಂಚಾಯತ್. ಕೋಣಿ. ೧೩೨. ಯುವಕ ಮಂಡಲ. ಗಂಗೊಳ್ಳಿ. ೧೩೩. ಪೈಕ ಮಂಜುನಾಥ, ಗಂಗೊಳ್ಳಿ. ೧೩೪. ಕೆ. ವಿಠಲ ಹೆಗ್ಡೆ. ಸೆಕ್ರೆಟರಿ. ವಂಡ್ಸೆ. ೧೩೫. ಡಿ. ಜನಾರ್ಧನ ಪೈ ಕುಂದಾಪುರ. ೧೩೬.

ಕೊಪ್ಪ. ೧೯೩. ಪಿ. ರಮಾನಾಥರಾವ್. ಕೊಪ್ಪ. ೧೯೪. ಆರ್. ರಾಮ ಭಟ್. ಕೊಪ್ಪ. ೧೯೫. ಬಿ. ಆನಂದ ಶೆಟ್ಟಿ, ಕಂಟ್ರಾಕ್ಟರ್. ಶೃಂಗೇರಿ. ೧೯೬. ಎಸ್. ಎನ್. ಶಿವರಾವ್. ನಗರಸಭಾಧ್ಯಕ್ಷ. ಶೃಂಗೇರಿ. ೧೯೭. ಕೆ. ಎಸ್. ಶೇಷಾಪ್ಪಯ್ಯ, ಬಾಳೆಹೊನ್ನೂರು. ೧೯೮. ಎಂ. ಗೋವಿಂದನ್ ಶೆಟ್ಟಿ. ಶೃಂಗೇರಿ. ೧೯೯. ಕೆ. ಶ್ರೀನಿವಾಸ ಶೆಣೈ. ಬಿ.ಎ.. ಶೃಂಗೇರಿ. ೨೦೦. ಎಚ್. ಕೆ. ಸುಂದರ ಶೆಟ್ಟಿ, ಶೃಂಗೇರಿ. ೨೦೧. ಎ. ಎಚ್. ಗುಣಪಾಲ ಭಂಡಾರಿ. ಬಾಳೆಹೊನ್ನೂರು. ೨೦೨. ಕೆಂಪ ಭಂಡಾರಿ. ಬಾಳೆಹೊನ್ನೂರು. ೨೦೩. ಭಟ್ ಬ್ರದರ್ಸ್. ಬಾಳೆಹೊನ್ನೂರು. ೨೦೪. ಎಂ. ಎಸ್. ಹೆಗ್ಡೆ. ಬಾಳೆಹೊನ್ನೂರು. ೨೦೫. ಎಂ. ಅಪ್ಪಣ್ಣ ಭಂಡಾರಿ. ಬಾಳೆಹೊನ್ನೂರು. ೨೦೬. ಪಿ. ಎಸ್. ಕಾಮಾಕ್ಷಮ್ಮ. ಬಾಳೆಹೊನ್ನೂರು. ೨೦೭. ಬಾಬುರಾವ್. ಜೈನ್. ಶಿವಮೊಗ್ಗ. ೨೦೮. ಎಸ್. ಅಣ್ಣಪ್ಪ ಭಂಡಾರಿ, ಸಾಗರ. ೨೦೯. ನಾಗು ಭಂಡಾರಿ, ಸಾಗರ. ೨೧೦. ಕೆ. ತಿಮ್ಮಯ್ಯ. ಸಾಗರ. ೨೧೧. ಕೆ. ವೆಂಕಪ್ಪ. ಬಿಗ್ಗೆಕೊಪ್ಪ. ೨೧೨. ಕೆ. ದಿವಾಕರ ಶೆಟ್ಟಿ. ಬಿ.ಎ..ಎಲ್‌ಎಲ್.ಬಿ. ಸೊರಬ. ೨೧೩. ಆರ್. ಮಾಧವರಾವ್. ಸೊರಬ. ೨೧೪. ದಯಾನಂದ ಎಂ. ಕುಮ್ಟೇಕರ್. ಸೊರಬ. ೨೧೫. ಕೆ. ರಾಜಾರಾವ್. ಸೊರಬ. ೨೧೬. ಎಚ್. ಹಸನ್ ಸಾಹೇಬ್. ಗೆಂಡ್ಲ ಹೊಸೂರು. ೨೧೭. ಎಂ. ವಿ. ಬಾಪಟ್. ಸೊರಬ. ೨೧೮. ಸೆಕ್ರೆಟರಿ, ಸಾರ್ವಜನಿಕ ಪುಸ್ತಕ ಭಂಡಾರ. ಶಿವಮೊಗ್ಗ. ೨೧೯. ಜಗನ್ನಾಥ ಭಂಡಾರಿ. ಸೊರಬ. ೨೨೦. ಕೆ. ಸದಾಶಿವಯ್ಯ. ಸೊರಬ. ೨೨೧. ಜಿ. ಎಸ್. ಗುರುಶಾಂತಪ್ಪ. ಸೊರಬ. ೨೨೨. ಎಸ್. ಆರ್. ಆಚಾರ್ಯ ಕಲ್ಸಂಕ, ಉಡುಪಿ.

[ಮುಂದುವರಿಯುದು]

Edited & Published by Koni Krishna Bhandary. Anegudde Maha Ganapathi Sahitya Prakashana, Kalsank, Udipi-2 and Printed by B. Krishnayya at Manipal Power Press, Manipal.